ದೇವೀಚತುಃಷಷ್ಟ್ಯುಪಚಾರಪೂಜಾಸ್ತೋತ್ರ

ಮತ್ತು

# ಸಪ್ತಮಾತೃಕಾಸಂಕ್ಷಿಪ್ತಮಾಹಾತ್ಮ್ಯ



ಕೆ. ಜಯರಾಮನ್

ಶ್ರೀ ಶಂಕರಾಚಾರ್ಯವಿರಚಿತ

# ದೇವೀಚತುಃಷಷ್ಟ್ಯುಪಚಾರಪೂಜಾಸ್ತೋತ್ರ

ಮತ್ತು

# ಸಪ್ತಮಾತೃಕಾಸಂಕ್ಷಿಪ್ತಮಾಹಾತ್ಮ್ಯ

**ಕೆ. ಜಯರಾಮನ್**
ಎಂ.ಎ. (ಸಂಸ್ಕೃತ), ಎಂ.ಎ.(ಇತಿಹಾಸ), ಬಿ.ಎಡ್.

**ಭಾರತೀ ಪಬ್ಲಿಕೇಷನ್ಸ್**
89, 10ನೇ ತಿರುವು, 4ನೇ ಮುಖ್ಯರಸ್ತೆ,
ವಿದ್ಯಾರಣ್ಯಪುರಂ,
ಮೈಸೂರು - 570 008

SHREE SHANKARAACHAARYA VIRACHITA
DEVI CHATUHSTSTUPACHAARA PUJA STOTRA Mattu
Saptamaatruka Samkshipta Maahatmay by K.Jayaraman.

No of pages : 185 + 15

First Edition : 2002

With the Financial Asistence by T.T.D. Tirupathi






Publishers
**Smt. Ambika,**
***Bharati Publications,***
No. 89.10th Cross, 4th Main Road,
Vidyaranyapuram, **MYSORE - 570 008**
Ph : (0821) 483720

Price Rs. 75/-

Printers :
**Udayaravi Offset Printers**
1354/1. Krishnamurthypuram,
Mysore - 570 004
Phone : 332971

ಶ್ರೀಃ

ಏತಚ್ಚರಿತ್ರಮಖಿಲಂ ಲಿಖಿತಂ ಹಿ ಯಸ್ಯಾಃ
ಸಂಪೂಜಿತಂ ಸದನ ಏವ ನಿವೇಶಿತಂ ವಾ |
ದುರ್ಗಂ ಚ ತಾರಯತಿ ದುಸ್ತರಮಪ್ಯಶೇಷಂ ಶ್ರೇಯಃ
ಪ್ರಯಚ್ಛತಿ ಚ ಸರ್ವಮುಮಾಂ ಭಜೇ ತಾಮ್ ||

ಅಪ್ಪಯ್ಯ ದೀಕ್ಷಿತರು.
(ದುರ್ಗಾಚಂದ್ರಕಲಾಸ್ತುತಿ - ೧೦)

*ಯಾವ ದೇವಿಯ ಮಾಹಾತ್ಮ್ಯೆಯನ್ನು ಬರೆಯುವುದು, ಅಥವಾ ಅವಳ ಮಹಿಮೆಯನ್ನು ವರ್ಣಿಸುವ ಗ್ರಂಥಗಳನ್ನು ಪೂಜಿಸುವುದು, ಅಥವಾ ಅವಳ ಮಾಹಾತ್ಮ್ಯೆಯಿಂದ ಕೂಡಿರುವ ಗ್ರಂಥಗಳನ್ನು ಮನೆಯಲ್ಲಿ ಇರಿಸುವುದರಿಂದಲೇ, ಒದಗ ಬಹುದಾದ ವಿಪತ್ತುಗಳೆಲ್ಲ ಪೂ ಇಲ್ಲವಾಗುತ್ತವೆ. ಅಂತಹ ಗೃಹಗಳಲ್ಲಿ ಸಂಪತ್ತು ನೆಲೆಸಿ ಸುಖ ಸಂತೋಷಗಳು ನೆಲೆಯಾಗುವುವು. ಅಂತಹ ದೇವಿ ಉಮೆಯನ್ನು ನಾನು ಪೂಜಿಸುತ್ತೇನೆ.*

# ಪ್ರಕಾಶಕರ ಮನವಿ

ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ |
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ||

'ಸತ್ಯಂ ವದ ಧರ್ಮಂ ಚರ' ಇದು ನಮ್ಮ ಋಷಿಪುಂಗವರಿಂದ ಅನುಗ್ರಹೀತವಾದ ಅನುಭವಾಮೃತ. ಸತ್ಯವು ಶಾಶ್ವತವಾದುದು. ಆಯಾ ಕಾಲಕ್ಕೆ ಧರ್ಮವು ಲೋಕಸ್ಥಿತಿಗೆ ಅನುಗುಣವಾಗಿ ತನ್ನ ಮಾರ್ಗವನ್ನು ತೋರಿಸುತ್ತಾ ಲೋಕಕ್ಕೆ ಜ್ಞಾನದ ಬೆಳಕನ್ನು ನೀಡುತ್ತದೆ. ದೈವಭಕ್ತಿ, ಅದರೊಂದಿಗೆ ಬೆರೆತ ರಾಷ್ಟ್ರ ಭಕ್ತಿ, ಇಂದಿನ ಯುಗಧರ್ಮವಾಗಿದೆ. ಶ್ರೀ ಶಂಕರಾಚಾರ್ಯರು ಪಂಚಾಯತನ ಪೂಜೆಯನ್ನು ರೂಪಿಸಿ ವೇದತತ್ತ್ವವಾದ "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂಬ ತತ್ತ್ವವನ್ನು ಅನುಷ್ಠಾನ ವೇದಾಂತವಾಗಿ ರೂಪಿಸಿದರು. ಅಂತಹ ಮಹಾಮಹಿಮರು ರಚಿಸಿದ ದೇವೀಚತುಃಷಷ್ಟ್ಯುಪಚಾರ ಪೂಜೆಯನ್ನು ಶ್ರೀ ಸಪ್ತಮಾತೃಕಾ ದೇವಿಯರಿಗೆ ನೆರವೇರಿಸಿ ಕೃತಕೃತ್ಯರಾಗಲು, ಅಂತೆಯೇ ಭಕ್ತವೃಂದ ಅಂತಹ ಪುಣ್ಯಕಾರ್ಯದಲ್ಲಿ ಭಾಗಿಗಳಾಗುವಂತೆ ಸರಳಭಾಷೆಯಲ್ಲಿ ಈ ಗ್ರಂಥವನ್ನು ರಚಿಸಿರುತ್ತಾರೆ.

ನಮ್ಮ ಭಾರತೀ ಪಬ್ಲಿಕೇಷನ್‌ನಿಂದ ಈ ಗ್ರಂಥಪುಷ್ಪವನ್ನು ಭಕ್ತರ ಕೈಗಳಲ್ಲಿಡಲು ಸಂತೋಷಿಸುತ್ತೇವೆ. ಇಂದಿನ ಬೆಲೆಯ ಏರು ಪೇರಿನಲ್ಲಿ ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ದೊರೆಯುವಂತೆ ಗ್ರಂಥವನ್ನು ಸಿದ್ಧಗೊಳಿಸಿದ್ದೇವೆ. ನಮ್ಮ ಈ ಸಾಹಸವನ್ನು ಮನ್ನಿಸಿ ಭಕ್ತಮಹನೀಯರು ಪ್ರೋತ್ಸಾಹಿಸಬೇಕಾಗಿ ವಿನಂತಿ.

ಈ ಗ್ರಂಥವನ್ನು ಬಹು ಕಡಿಮೆ ಕಾಲದಲ್ಲಿ ಮುದ್ರಿಸಿಕೊಟ್ಟ ಉದಯರವಿ ಪ್ರಿಂಟರ್ಸ್ ಮೈಸೂರುರವರಿಗೆ ನಮ್ಮ ಕೃತಜ್ಞತೆಗಳು.

ಸರ್ವರೂಪಮಯೀ ದೇವೀ ಸರ್ವಂ ದೇವಮಯಂ ಜಗತ್ |
ಅತೋಽಹಂ ವಿಶ್ವರೂಪಾಂ ತಾಂ ನಮಾಮಿ ಪರಮೇಶ್ವರೀಮ್ ||
ಜಗನ್ಮಾತೆಯು ಸರ್ವರನ್ನು ರಕ್ಷಿಸಲಿ.

ಶ್ರೀಮತಿ ಅಂಬಿಕಾ
ಪ್ರಕಾಶಕರು.



श्री श्री जगद्गुरु शंकराचार्य महासंस्थानम् ,
दक्षिणाम्नाय श्री शारदापीठम्, शृंगेरी

SRI SRI JAGADGURU SHANKARACHARYA MAHASAMSTHANAM
DAKSHINAMNAYA SRI SHARADA PEETHAM, SRINGERI

Sahitya Mahopadhyaya
Dr. N.S. DAKSHINA MURTHY
M.A.(Hindi), M.A.(Sanskrit), Ph.D.
*Personal Assistant to His Holiness*
*Sri Jagadguru Shankaracharya Mahasannidhanam*

SRINGERI

Ref ಡ-7/

Date : 14-9-2001

ಗೆ,

ಶ್ರೀ ಕೆ. ಜಯರಾಮನ್
7-ಬಿ, 1ನೇ ಬ್ಲಾಕ್, 1ನೇ ಸ್ಟೇಜ್
ಪೋಸ್ಟಲ್ ಕಾಲೋನಿ
ವಿಶ್ವೇಶ್ವರನಗರ, ಮೈಸೂರು-570 008

ಶ್ರೀಯುತ ಕೆ. ಜಯರಾಮನ್ ಅವರಿಗೆ,

ನೀವು ಶ್ರೀಶ್ರೀಗಳವರ ಚರಣಾರವಿಂದಗಳಲ್ಲಿ ಸಮರ್ಪಿಸಿದ ಶ್ರೀ ಶಂಕರಾಚಾರ್ಯವಿರಚಿತ "ದೇವೀಚತುಷ್ಷಷ್ಟ್ಯುಪಚಾರಪೂಜಾಸ್ತೋತ್ರ ಮತ್ತು ಸಪ್ತಮಾತೃಕಾಸಂಕ್ಷಿಪ್ತಮಹಾತ್ಮ್ಯೆ" ಪುಸ್ತಕವನ್ನು ಶ್ರೀಶ್ರೀಗಳವರು ಅವಲೋಕಿಸಿ ತುಂಬಾ ಸಂತೋಷಪಟ್ಟಿದ್ದಾರೆ. ಈ ಪುಸ್ತಕದ ಪ್ರಕಟಣೆಯಿಂದ ಸಕಲರೂ ಇದರ ಪ್ರಯೋಜನವನ್ನು ಪಡೆಯುವಂತಾಗಲೆಂದೂ ಶ್ರೀಶ್ರೀಗಳವರು ಆಶೀರ್ವದಿಸಿರುತ್ತಾರೆ.

ಶ್ರೀಶ್ರೀಗಳವರು ಅನುಗ್ರಹಿಸಿದ ಆಶೀರ್ಮಂತ್ರಾಕ್ಷತೆ ಮತ್ತು ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಇದರೊಂದಿಗೆ ಲಗತ್ತಿಸಲಾಗಿದೆ.

ಇಂತು,

ಲಗತ್ತು: ಪ್ರಸಾದ.

SHREE SHANKARAACHAARYA VIRACHITA
DEVI CHATUHSTSTUPACHAARA PUJA STOTRA Mattu
Saptamaatruka Samkshipta Maahatmay by K.Jayaraman.

No of pages : 185 + 15

First Edition : 2002

With the Financial Asistence by T.T.D. Tirupathi





Publishers
**Smt. Ambika,**
***Bharati Publications,***
No. 89.10th Cross, 4th Main Road,
Vidyaranyapuram, **MYSORE - 570 008**
Ph : (0821) 483720

Price Rs. 75/-

Printers :
**Udayaravi Offset Printers**
1354/1. Krishnamurthypuram,
Mysore - 570 004
Phone : 332971

ಶ್ರೀಃ

ಏತಚ್ಚರಿತ್ರಮಖಿಲಂ ಲಿಖಿತಂ ಹಿ ಯಸ್ಯಾಃ
ಸಂಪೂಜಿತಂ ಸದನ ಏವ ನಿವೇಶಿತಂ ವಾ ।
ದುರ್ಗಂ ಚ ತಾರಯತಿ ದುಸ್ತರಮಪ್ಯಶೇಷಂ ಶ್ರೇಯಃ
ಪ್ರಯಚ್ಛತಿ ಚ ಸರ್ವಮುಮಾಂ ಭಜೇ ತಾಮ್ ॥

ಅಪ್ಪಯ್ಯ ದೀಕ್ಷಿತರು.
(ದುರ್ಗಾಚಂದ್ರಕಲಾಸ್ತುತಿ - ೧೦)

*ಯಾವ ದೇವಿಯ ಮಾಹಾತ್ಮ್ಯೆಯನ್ನು ಬರೆಯುವುದು, ಅಥವಾ ಅವಳ ಮಹಿಮೆಯನ್ನು ವರ್ಣಿಸುವ ಗ್ರಂಥಗಳನ್ನು ಪೂಜಿಸುವುದು, ಅಥವಾ ಅವಳ ಮಾಹಾತ್ಮ್ಯೆಯಿಂದ ಕೂಡಿರುವ ಗ್ರಂಥಗಳನ್ನು ಮನೆಯಲ್ಲಿ ಇರಿಸುವುದರಿಂದಲೇ, ಒದಗಬಹುದಾದ ವಿಪತ್ತುಗಳೆಲ್ಲವೂ ಇಲ್ಲವಾಗುತ್ತವೆ. ಅಂತಹ ಗೃಹಗಳಲ್ಲಿ ಸಂಪತ್ತು ನೆಲೆಸಿ ಸುಖ ಸಂತೋಷಗಳು ನೆಲೆಯಾಗುವುವು. ಅಂತಹ ದೇವಿ ಉಮೆಯನ್ನು ನಾನು ಪೂಜಿಸುತ್ತೇನೆ.*

No of pages : 185 + 15

First Edition : 2002

**With the Financial Asistence by T.T.D. Tirupathi**






Publishers
**Smt. Ambika,**
***Bharati Publications,***
No. 89.10th Cross, 4th Main Road,
Vidyaranyapuram, **MYSORE - 570 008**
Ph : (0821) 483720

Price Rs. 75/-

Printers :
**Udayaravi Offset Printers**
1354/1. Krishnamurthypuram,
Mysore - 570 004
Phone : 332971

# ಶ್ರೀಃ

ಏತಚ್ಚರಿತ್ರಮಖಿಲಂ ಲಿಖಿತಂ ಹಿ ಯಸ್ಯಾಃ
ಸಂಪೂಜಿತಂ ಸದನ ಏವ ನಿವೇಶಿತಂ ವಾ |
ದುರ್ಗಂ ಚ ತಾರಯತಿ ದುಸ್ತರಮಪ್ಯಶೇಷಂ ಶ್ರೇಯಃ
ಪ್ರಯಚ್ಛತಿ ಚ ಸರ್ವಮುಮಾಂ ಭಜೇ ತಾಮ್ ||

ಅಪ್ಪಯ್ಯ ದೀಕ್ಷಿತರು.
(ದುರ್ಗಾಚಂದ್ರಕಲಾಸ್ತುತಿ - ೧೦)

*ಯಾವ ದೇವಿಯು ಮಾಹಾತ್ಮ್ಯೆಯನ್ನು ಬರೆಯುವುದು, ಅಥವಾ ಅವಳ ಮಹಿಮೆಯನ್ನು ವರ್ಣಿಸುವ ಗ್ರಂಥಗಳನ್ನು ಪೂಜಿಸುವುದು, ಅಥವಾ ಅವಳ ಮಾಹಾತ್ಮ್ಯೆಯಿಂದ ಕೂಡಿರುವ ಗ್ರಂಥಗಳನ್ನು ಮನೆಯಲ್ಲಿ ಇರಿಸುವುದರಿಂದಲೇ, ಒದಗ ಬಹುದಾದ ವಿಪತ್ತುಗಳೆಲ್ಲವೂ ಇಲ್ಲವಾಗುತ್ತವೆ. ಅಂತಹ ಗೃಹಗಳಲ್ಲಿ ಸಂಪತ್ತು ನೆಲೆಸಿ ಸುಖ ಸಂತೋಷಗಳು ನೆಲೆಯಾಗುವುವು. ಅಂತಹ ದೇವಿ ಉಮೆಯನ್ನು ನಾನು ಪೂಜಿಸುತ್ತೇನೆ.*

# ಪ್ರಕಾಶಕರ ಮನವಿ

ಸರ್ವಮಂಗಲ ಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ |
ಶರಣ್ಯೇ ತ್ರ್ಯಂಬಕೇ ಗೌರಿ ನಾರಾಯಣಿ ನಮೋಽಸ್ತು ತೇ ||

'ಸತ್ಯಂ ವದ ಧರ್ಮಂ ಚರ ' ಇದು ನಮ್ಮ ಋಷಿಪುಂಗವರಿಂದ ಅನುಗ್ರಹೀತವಾದ ಅನುಭವಾಮೃತ. ಸತ್ಯವು ಶಾಶ್ವತವಾದುದು. ಆಯಾ ಕಾಲಕ್ಕೆ ಧರ್ಮವು ಲೋಕಸ್ಥಿತಿಗೆ ಅನುಗುಣವಾಗಿ ತನ್ನ ಮಾರ್ಗವನ್ನು ತೋರಿಸುತ್ತಾ ಲೋಕಕ್ಕೆ ಜ್ಞಾನದ ಬೆಳಕನ್ನು ನೀಡುತ್ತದೆ. ದೈವಭಕ್ತಿ, ಅದರೊಂದಿಗೆ ಬೆರೆತ ರಾಷ್ಟ್ರ ಭಕ್ತಿ, ಇಂದಿನ ಯುಗಧರ್ಮವಾಗಿದೆ. ಶ್ರೀ ಶಂಕರಾಚಾರ್ಯರು ಪಂಚಾಯತನ ಪೂಜೆಯನ್ನು ರೂಪಿಸಿ ವೇದತತ್ತ್ವವಾದ "ಸರ್ವ ದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ" ಎಂಬ ತತ್ತ್ವವನ್ನು ಅನುಷ್ಠಾನ ವೇದಾಂತವಾಗಿ ರೂಪಿಸಿದರು. ಅಂತಹ ಮಹಾಮಹಿಮರು ರಚಿಸಿದ ದೇವೀಚತುಃಷಷ್ಟ್ಯುಪಚಾರ ಪೂಜೆಯನ್ನು ಶ್ರೀ ಸಪ್ತಮಾತೃಕಾ ದೇವಿಯರಿಗೆ ನೆರವೇರಿಸಿ ಕೃತಕೃತ್ಯರಾಗಲು, ಅಂತೆಯೇ ಭಕ್ತವೃಂದ ಅಂತಹ ಪುಣ್ಯಕಾರ್ಯದಲ್ಲಿ ಭಾಗಿಗಳಾಗುವಂತೆ ಸರಳಭಾಷೆಯಲ್ಲಿ ಈ ಗ್ರಂಥವನ್ನು ರಚಿಸಿರುತ್ತಾರೆ.

ನಮ್ಮ ಭಾರತೀ ಪಬ್ಲಿಕೇಷನ್‌ನಿಂದ ಈ ಗ್ರಂಥಪುಷ್ಪವನ್ನು ಭಕ್ತರ ಕೈಗಳಲ್ಲಿಡಲು ಸಂತೋಷಿಸುತ್ತೇವೆ. ಇಂದಿನ ಬೆಲೆಯ ಏರು ಪೇರಿನಲ್ಲಿ ಸಾಧ್ಯವಾದಷ್ಟು ಕಡಿಮೆ ಬೆಲೆಯಲ್ಲಿ ದೊರೆಯುವಂತೆ ಗ್ರಂಥವನ್ನು ಸಿದ್ಧಗೊಳಿಸಿದ್ದೇವೆ. ನಮ್ಮ ಈ ಸಾಹಸವನ್ನು ಮನ್ನಿಸಿ ಭಕ್ತಮಹನೀಯರು ಪ್ರೋತ್ಸಾಹಿಸಬೇಕಾಗಿ ವಿನಂತಿ.

ಈ ಗ್ರಂಥವನ್ನು ಬಹು ಕಡಿಮೆ ಕಾಲದಲ್ಲಿ ಮುದ್ರಿಸಿಕೊಟ್ಟ ಉದಯರವಿ ಪ್ರಿಂಟರ್ಸ್ ಮೈಸೂರುರವರಿಗೆ ನಮ್ಮ ಕೃತಜ್ಞತೆಗಳು.

ಸರ್ವರೂಪಮಯೀ ದೇವೀ ಸರ್ವಂ ದೇವಮಯಂ ಜಗತ್ |
ಅತೋಽಹಂ ವಿಶ್ವರೂಪಾಂ ತಾಂ ನಮಾಮಿ ಪರಮೇಶ್ವರೀಮ್ ||
ಜಗನ್ಮಾತೆಯು ಸರ್ವರನ್ನು ರಕ್ಷಿಸಲಿ.

ಶ್ರೀಮತಿ ಅಂಬಿಕಾ
ಪ್ರಕಾಶಕರು.



श्री श्री जगद्गुरु शंकराचार्य महासंस्थानम् ,
दक्षिणाम्नाय श्री शारदापीठम्, शृंगेरी

SRI SRI JAGADGURU SHANKARACHARYA MAHASAMSTHANAM
DAKSHINAMNAYA SRI SHARADA PEETHAM, SRINGERI


Sahitya Mahopadhyaya
Dr. N.S. DAKSHINA MURTHY
M.A.(Hindi), M.A.(Sanskrit), Ph.D.
*Personal Assistant to His Holiness*
*Sri Jagadguru Shankaracharya Mahasannidhanam*


SRINGERI

Ref ದ-71

Date : 14-9-2001

ಗೆ,

ಶ್ರೀ ಕೆ. ಜಯರಾಮನ್
7-ಬಿ, 1ನೇ ಬ್ಲಾಕ್, 1ನೇ ಸ್ಟೇಜ್
ಪೋಸ್ಟಲ್ ಕಾಲೋನಿ
ವಿಶ್ವೇಶ್ವರನಗರ, ಮೈಸೂರು-570 008

ಶ್ರೀಯುತ ಕೆ. ಜಯರಾಮನ್ ಅವರಿಗೆ,

ನೀವು ಶ್ರೀಶ್ರೀಗಳವರ ಚರಣಾರವಿಂದಗಳಲ್ಲಿ ಸಮರ್ಪಿಸಿದ ಶ್ರೀ ಶಂಕರಾಚಾರ್ಯವಿರಚಿತ "ದೇವೀಚತುಃಷಷ್ಟ್ಯುಪಚಾರಪೂಜಾಸ್ತೋತ್ರ, ಮತ್ತು ಸಪ್ತಮಾತೃಕಾಸಂಕ್ಷಿಪ್ತಮಹಾತ್ಮೆ" ಪುಸ್ತಕವನ್ನು ಶ್ರೀಶ್ರೀಗಳವರು ಅವಲೋಕಿಸಿ ತುಂಬಾ ಸಂತೋಷಪಟ್ಟಿದ್ದಾರೆ. ಈ ಪುಸ್ತಕದ ಪ್ರಕಟಣೆಯಿಂದ ಸಕಲರೂ ಇದರ ಪ್ರಯೋಜನವನ್ನು ಪಡೆಯುವಂತಾಗಲೆಂದೂ ಶ್ರೀಶ್ರೀಗಳವರು ಆಶೀರ್ವದಿಸಿರುತ್ತಾರೆ.

ಶ್ರೀಶ್ರೀಗಳವರು ಅನುಗ್ರಹಿಸಿದ ಆಶೀರ್ಮಂತ್ರಾಕ್ಷತೆ ಮತ್ತು ಶ್ರೀ ಶಾರದಾ ಚಂದ್ರಮೌಳೀಶ್ವರರ ಪ್ರಸಾದವನ್ನು ಇದರೊಂದಿಗೆ ಲಗತ್ತಿಸಲಾಗಿದೆ.

ಇಂತು,

ಅಡಕ: ಪ್ರಸಾದ.

ಶ್ರೀ

ನನ್ನ
ಜೀವನಕ್ಕೊಂದು ದಾರಿ ನೀಡಿದ,
ಮಮತಾಮಯಿ, ನನ್ನ ಅಕ್ಕಂದಿರಾದ

**ಶ್ರೀಮತಿ ಅರವಿಂದಮ್ಮನವರು**

ಮತ್ತು
ಕರ್ತವ್ಯನಿಷ್ಠರಾಗಿದ್ದ ನನ್ನ ಭಾವಂದಿರಾದ

**ಶ್ರೀ ಸುಬ್ಬರಾವ್ ರವರ**

ದಿವ್ಯ ಸ್ಮೃತಿಗಾಗಿ

## ಸಮರ್ಪಣೆ

ವೇದಕಾಲದಿಂದಲೂ ಭಗವಂತನನ್ನು ದೇವೀ ರೂಪದಲ್ಲಿ ಆರಾಧಿಸುವುದು ರೂಢಿಯಲ್ಲಿದೆ ನಾವೇಕೆ ಶಕ್ತಿಯನ್ನು ದೇವೀ ರೂಪದಲ್ಲಿ ಆರಾಧಿಸುತ್ತೇವೆ? ಪುರುಷರೂಪದಲ್ಲಿ ಏಕೆ ಆರಾಧಿಸುವುದಿಲ್ಲ?

ಪ್ರತಿಯೊಬ್ಬ ಮಾನವನಲ್ಲಿಯೂ ಸ್ತ್ರೀ ಮತ್ತು ಪುರುಷ ಭಾವಗಳೂ ಇವೆ ಎಂದು ಮನಶ್ಶಾಸ್ತ್ರಜ್ಞರು ಹೇಳುತ್ತಾರೆ. ಚಿಂತನಾತ್ಮಕ ಅಂಶ ಪುರುಷ ಭಾವವೆಂದೂ ಭಾವನಾತ್ಮಕ ಅಂಶ ಸ್ತ್ರೀ ಭಾವವೆಂದೂ ಹೇಳುತ್ತಾರೆ. ಆದರೆ ಕೇವಲ ಚಿಂತನೆಯಿಂದ ಏನೂ ಆಗದು. ಚಿಂತನೆಗೆ ಶಕ್ತಿಯನ್ನು ನೀಡುವುದು ಭಾವನೆ. ಕೇವಲ ಚಿಂತನೆ ಶ್ರೇಷ್ಠವಾದುದು. ಅದರೊಡನೆ ಪ್ರೀತಿ, ಅನುಕಂಪ, ರಾಗ, ದ್ವೇಷ, ಭಯ ಮುಂತಾದ ಯಾವುದಾದರೂ ಭಾವನೆ ಸೇರಿದಾಗಲೇ ಅದು ಕ್ರಿಯಾರೂಪದಲ್ಲಿ ವ್ಯಕ್ತವಾಗಬಲ್ಲದು. ಒಬ್ಬ ಯೋಧನಿಗೆ ಎಷ್ಟೇ ದೈಹಿಕ ಮತ್ತು ಆಲೋಚನಾ ಶಕ್ತಿ ಇದ್ದರೂ, ಎಷ್ಟೇ ಸೈನಿಕ ತರಬೇತಿ ಇದ್ದರೂ, ಅವನಲ್ಲಿ ದೇಶಭಕ್ತಿಯೆಂಬ ಭಾವನಾ ಶಕ್ತಿ ಇಲ್ಲದಿದ್ದರೆ ಅವನು ಸಮರ್ಥನಾಗಿ ಹೋರಾಡಲಾರ. ಇದೇ ನಿಷೇಧಾತ್ಮಕ ಭಾವನೆಗೂ ಅನ್ವಯಿಸುತ್ತದೆ.

ಈ ಭಾವನಾ ಶಕ್ತಿ ಸ್ತ್ರೀ ಅಂಶ. ಸ್ತ್ರೀ ಶಕ್ತಿಯ ಬಗ್ಗೆ ಸ್ವಾಮಿ ವಿವೇಕಾನಂದರು ಹೀಗೆ ಹೇಳುತ್ತಾರೆ. "500 ಪುರುಷರಿಂದ ಭಾರತದ ಏಳಿಗೆಯಾಗಬೇಕಾದರೆ ಸುಮಾರು 50ವರ್ಷಗಳ ಸಮಯ ಬೇಕಾದರೆ ಅದೇ ಕೆಲಸವನ್ನು 500 ಸ್ತ್ರೀಯರಿಂದ 5 ವಾರದಲ್ಲಿ ಸಾಧಿಸಬಹುದು."

ಆದ್ದರಿಂದಲೇ ಶಕ್ತಿಯನ್ನು ದೇವೀ ರೂಪದಲ್ಲಿ ಆರಾಧಿಸುವುದು ರೂಢಿಯಲ್ಲಿದೆ. "ಶ್ರೀ ದುರ್ಗಾಸಪ್ತಶತಿ"ಯೂ ಇದನ್ನೇ ಸಮರ್ಥಿಸುತ್ತದೆ. ಮಹಿಷಾಸುರನಿಂದ ಸೋಲನ್ನನುಭವಿಸಿದ ದೇವತೆಗಳು ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಆಶ್ರಯಿಸುತ್ತಾರೆ. ಮಹಿಷಾಸುರನ ಕೃತ್ಯವನ್ನು ಕೇಳಿದ ಅವರು ಕೋಪೋದ್ರಿಕ್ತರಾಗುತ್ತಾರೆ. ಅವರ ಮತ್ತು ದೇವತೆಗಳೆಲ್ಲರ ಕೋಪವು ಸೇರಿ ಒಂದು ಸ್ತ್ರೀ ರೂಪದಲ್ಲಿ ವ್ಯಕ್ತವಾಗುತ್ತದೆ. ಆಕೆಯೇ ಮಹಿಷಾಸುರಮರ್ದಿನಿ (ಶ್ರೀ ದುರ್ಗಾಸಪ್ತಸತೀ, ೨, ೯, ೧೨).

ದೇವಿಗೆ ಸಂಬಂಧಿಸಿದ ಸಾಹಿತ್ಯರಾಶಿಯೇ ಇದೆ. ಅನೇಕ ಮಹಾಪುರುಷರು ದೇವಿಯನ್ನು ಕುರಿತು ಸ್ತೋತ್ರಗಳನ್ನು ರಚಿಸಿರುವರು. ವಿಶೇಷವಾಗಿ ಶ್ರೀಶಂಕರಭಗವತ್ಪಾದರ ಸ್ತೋತ್ರಗಳು ಅತ್ಯಂತ ಪ್ರಸಿದ್ಧವಾಗಿವೆ. ಇಷ್ಟೇ ಅಲ್ಲದೆ ಭಾರತದ ಉದ್ದಗಲಕ್ಕೂ ಅನೇಕ ಶಕ್ತಿಪೀಠಗಳಿವೆ. ದೇವಿಯ ಬೇರೆ ಬೇರೆ ರೂಪಗಳಾದ ಸಪ್ತಮಾತೃಕೆಯರು, ಶಕ್ತಿ ಪೀಠಗಳು, ವಿವಿಧ ದೇವೀಸ್ತೋತ್ರಗಳು ಮುಂತಾದ ವಿಷಯಗಳನ್ನೊಳಗೊಂಡ ಈ ಗ್ರಂಥವು ಶಕ್ತಿ ಉಪಾಸಕರಿಗೆ ತುಂಬ ಉಪಯುಕ್ತವಾಗಿದೆ. ಈ ಅಪೂರ್ವ ಕೃತಿಯನ್ನು ಸಿದ್ಧಪಡಿಸಿರುವ ಶ್ರೀ ಕೆ. ಜಯರಾಮನ್ ಅವರು ಶ್ಲಾಘನೀಯ ಕಾರ್ಯವನ್ನು ಎಸಗಿರುವರು. ಉಪಾಸಕರು ಇದರ ಪ್ರಯೋಜನವನ್ನು ಪಡೆದರೆ ಅವರ ಶ್ರಮ ಸಾರ್ಥಕವಾದಂತಾಗುತ್ತದೆ.

ಶ್ರೀರಾಮಕೃಷ್ಣ ಆಶ್ರಮ
ಮೈಸೂರು.

ಸ್ವಾಮಿ ನಿತ್ಯಸ್ಥಾನಂದ

# ಬಿನ್ನಹ

ಕಲ್ಯಾಣಾನಿ ತನೋತು ಕಾಪಿ ತರುಣೀ ಶೃಂಗಾದ್ರಿಭೂಷಾಯಿತಾ |
ಶ್ರೀಮಚ್ಛಂಕರ ದೇಶಿಕೇಂದ್ರಕಲಿತಂ ಚಕ್ರಂ ಸದಾಧಿಷ್ಠಿತಾ ||
ದೂರಸ್ಥಾಮಪಿ ಪಾದನಮ್ರಜನತಾಂ ವಿದ್ಯಾಯುರಾರೋಗ್ಯಂ ಸತ್
ಸಂತತ್ಯಾದಿ ಮನೋರಥಾಪ್ತಿಸಹಿತಂ ಸಂತನ್ವತೀ ಸತ್ವರಮ್ ||

ಕಲ್ಯಾಣಮಯಿಯಾದ ಶೃಂಗೇರಿಯಲ್ಲಿ ನೆಲೆಸಿರುವ ಹೇ ಶಾರದೇ, ಶ್ರೀ ಶಂಕರ ಭಗವತ್ಪಾದರಿಂದ ಪ್ರತಿಷ್ಠಾಪಿಸಿದ ಶ್ರೀ ಚಕ್ರದ ಮೇಲೆ ನೀನು ನೆಲೆಸಿರುವೆ. ಜ್ಞಾನ, ದೀರ್ಘಾಯಸ್ಸು, ಆರೋಗ್ಯ, ಸಂತತಿ ಮತ್ತು ನಮ್ಮ ಅನೇಕ ಕಾಮನೆಗಳನ್ನು ನೆರವೇರಿಸಲು ಕಾದಿರುವೆ. ನಿನ್ನ ದರ್ಶನಕ್ಕಾಗಿ ದೂರದಿಂದ ಬರುವ ಭಕ್ತರಿಗೆ ಆಶ್ರಯದಾತೆಯಾದ ನೀನು ನನಗೆ ಹಿತವಾದುದನ್ನು ಮಾಡುವವಳಾಗು.

ಸರ್ವಮಂಗಳೆಯೂ, ಜ್ಞಾನಮಯಿಯೂ, ಸರ್ವಶಕ್ತಳೂ, ಮಹಾಮಹಿಮಳೂ, ಸುರವಂದ್ಯಳೂ, ಸರ್ವಮಾನ್ಯೆಯೂ ಆದ ದೇವಿ ಶಾರದೆಯು ಭಕ್ತಜನರನ್ನು ಉದ್ಧರಿಸಲು, ಅವರ ಅಭೀಷ್ಟಗಳನ್ನು ನೆರವೇರಿಸಲು ಸ್ವರ್ಣರಥಾರೂಢಳಾಗಿ ಹೊರಟರೆ ಅವಳ ಸ್ತುತಿಪಾಠ ಮಾಡುವವರು ಎಷ್ಟು ಮಂದಿ ? ವೇದಘೋಷವ ಮಾಡುವ ವಿದ್ವಾಂಸರು, ಪೂಜಾದ್ರವ್ಯಗಳನ್ನು ಹೊತ್ತು ಬರುವ ಸುಮಂಗಲಿಯರು, ಅವರ ಹಿಂದೆ ಬರುವ ಗಾಯಕಿಯರು ಎಲ್ಲರ ಮುಂದೆ ಹೊರಡುವ ಮಂಗಳವಾದ್ಯದವರು, ನಿನ್ನ ಸ್ತುತಿ ಗೈಯುವುದನ್ನು ನೋಡಿದರೆ ದೇವಿ ನಿನ್ನ ಮಹಿಮೆ ಎಂತಹುದೆಂದು ಅರ್ಥವಾಗುತ್ತದೆ. ಅಷ್ಟಮುಖದ ರಥದಲ್ಲಿ ಮಂಡಿಸಿ ಒಂದು ಮುಖದಲ್ಲಿ ನೀನು ಆಸೀನಳಾದರೆ ಉಳಿದ ಮುಖದಲ್ಲಿ ಸಪ್ತಮಾತೃಕೆಯರಿಂದ ಪರಿಶೋಭಿತಳಾಗಿರುವೆ. ದೇವಿಯರ ಮಾತೃವಾಗಿ ವಿಜೃಂಭಿಸುವ ನಿನ್ನ ದರ್ಶನಭಾಗ್ಯ ಪುಣ್ಯವಂತರಿಗಲ್ಲವೇ ?

ಬಹು ಜನ್ಮದ ಪೂಜಾ ಫಲದ ರೂಪದಲ್ಲಿ ನೀನು ದರ್ಶನವಿತ್ತಿರುವೆ ತಾಯೆ, ನಿನಗೆ ಯಾವ ಒಡಲಿನಿಂದ ನಮಸ್ಕರಿಸಲಿ. ಯಾವ ನಾಲಿಗೆಯಿಂದ ಸ್ತುತಿಸಲಿ, ನಿನ್ನ ಧವಳ ಕೀರ್ತಿಯ ಮುಂದೆ ನನ್ನ ಸ್ತುತಿ ಎಲ್ಲಿಯದು ? ನಾನೆಂತಹ ಅಲ್ಪ, ಅಂತಹವರಿಗೂ ದರ್ಶನ ವಿತ್ತು ಹರಸುವ ನೀನೆಂತಹ ಕರುಣಾಮಯಿ, ನನ್ನ ತೊದಲು ನುಡಿಯನಾಲಿಸುವ ನೀನು ಎಂತಹ ಮಮತಾಮಯಿ, ಸಹಸ್ರ ಮುಖದವಳಾದ ನಿನ್ನನ್ನು ಈ ಎರಡು ಕಿರಿಗಣ್ಣುಗಳಿಂದ ಹೇಗೆ ನೋಡಿ ಸಂತೋಷಿಸಲಿ ?

ಸನಕ ಸನಂದನಾದಿಗಳ ಸಾಲಿನಲ್ಲಿ ನಿಲ್ಲುವ ಋಷಿವರೇಣ್ಯರು ನಿನ್ನ ಕೀರ್ತಿಯನ್ನು ಹಾಡಲು ಸಾಲಾಗಿ ನಿಂತಿರುವಾಗ ನನಗಾವ ಅರ್ಹತೆ ಇದೆ, ನಿನ್ನ ಕೀರ್ತಿಯನ್ನು ಸವಿಯಲು. ನಿನ್ನ ದರ್ಶನದಿಂದ ಅನುಗ್ರಹಿಸು ಆ ಭಾಗ್ಯವನು. ವಂದಿಪೆನು ನಿನ್ನ ಬಾರಿಬಾರಿಗೂ, ನೀನು

ತುಂಬ, ಸ್ವೀಕರಿಸು, ಸ್ವೀಕರಿಸು, ಸ್ವೀಕರಿಸು.

ನನ್ನ ಹೃದಯಾಂತರಾಳದಿಂದ ಹೊರ ಬರುವ ಭಾವವನ್ನು ವರ್ಣಿಸಲು [illegible] ಸಾಮರ್ಥ್ಯ ವಿಲ್ಲ. ನಯ, ನಯನ, ವಾಕ್ಯಾರ್ಥಗಳಿಂದ ಬಣ್ಣಿಸಲು ಅರಿವಿಲ್ಲ. ನಿನಗೆ [illegible] ವಂದಿಸಲು ಅಭ್ಯಾಸವಿಲ್ಲ. ಇರುವುದೊಂದೆ ಒಂದು, ಅದು ನಿನಗಾಗಿ [illegible] ಅದೇ ನನ್ನ ಹೃದಯಾಂತರಾಳದ ಭಕ್ತಿ. ಸ್ವೀಕರಿಸು ದೇವಿ, ನೀ ಕೃಪಾ[illegible].

ಇದೋ ಈ ಭಕ್ತಿಪುಷ್ಪ ನಿನ್ನ ಪಾದಕೆ ತಂದೆ, ನನ್ನ ಅಲ್ಪತನದಲ್ಲಿ [illegible] ನಿನ್ನನ್ನು, ಒಪ್ಪು ತಪ್ಪುಗಳೆಲ್ಲವೂ ನಿನ್ನದೇ ? ನೀನು ಇತ್ತ ಬುದ್ಧಿಯಲ್ಲಿ ನಿನ್ನ [illegible] ಬೆಳಗಿಹೆನು? ನೀನು ಇತ್ತಿದ್ದರೆ ದಿವ್ಯ ಜ್ಞಾನವನು ನಾನು ಸ್ತುತಿಸುತ್ತಿದ್ದೆ [illegible]. [illegible] ಮಾಡಲಿ, ನನಗೆ ಬಂದುದನ್ನು ಒಪ್ಪಿಸಿರುವೆ. ಒಪ್ಪಿಸಿಕೊ ಹೇ ದೇವಿ ನಿನ್ನ [illegible].

ನನಗೇಕೆ ಇತ್ತೆ ಈ ಪ್ರೇರಣೆಯ ನಾನರಿಯೆ ? ನಿನ್ನ ಪ್ರೇರಣೆಯಂತೆ [illegible] ಮುಗಿಸಲಾರದ ನಿನ್ನ ಮಹಾತ್ಮ್ಯೆಯನು. ಕಿರಿಯರು ಹಿರಿಯರಿಗೆ ಸುಲಭವಾಗಿ [illegible] ಬಹು ಕಡಿಮೆ ಪುಟಗಳಲ್ಲಿ ಸಂಕ್ಷಿಪ್ತಗೊಳಿಸಿರುವೆ. ಹೇ ದೇವಿ ನಿನ್ನ [illegible] ನನ್ನ ಸರ್ವಸ್ವ, ಅದಕ್ಕಾಗಿ ಕಾದಿಹೆನು ಹಗಲು ಇರುಳು, ನಿನ್ನ ಕೃಪೆ ಒಂದು ಕ್ಷಣ ದೊರಕಿದರೆ ಸಾಕು. ಈ ಜನ್ಮ ಸಾರ್ಥಕ್ಯಕೆ, ಅನುಗ್ರಹಿಸು ದೇವಿ ನೀ ಕರುಣಾಮಯಿ. ನಿನ್ನ [illegible] ಸಾಕು ನನ್ನ ಪ್ರಾರಬ್ಧವ ತೊಲಗಿಸಲು, ಸತ್ ಸಂಚಿತದ [illegible]. ಈ ಭವ ಸಾಗರವ ದಾಟಲು.

ಮಾನ್ಯ ಭಕ್ತ ಶಿರೋಮಣಿಗಳೇ ,

ದೇವೀ ಮಹಾತ್ಮ್ಯೆಯನ್ನು ಬರೆಯುವುದು ಬಹಳ ಜವಾಬ್ದಾರಿಯ ಕೆಲಸ. ಇದು ಕೇವಲ ಒಂದು ಸಣ್ಣ ಭಕ್ತಿಮಾಲೆ. ನಳನಳಿಸುವ ಅದ್ವೈತತತ್ತ್ವದ ಹೂದೋಟದಲ್ಲಿ ಬಗೆಬಗೆಯ ಹೂಗಳನ್ನು ಕಾಣುತ್ತೇವೆ. ಅದರಲ್ಲಿ ನನಗೆ ಹಿತವಾದುದನ್ನು ಆರಿಸಿ ಈ ಹೂಮಾಲೆ ತಯಾರಿಸಿರುತ್ತೇನೆ. ಭಕ್ತಮಹನೀಯರು ತಮಗೆ ಬೇಕಾದ ಹೂಗಳನ್ನು ಆರಿಸಲು ಆ ಸಾಹಿತ್ಯ ಭಂಡಾರವೆನ್ನುವ ಹೂದೋಟಕ್ಕೇ ಹೋಗಬೇಕು. ಅರ್ವಾಚೀನ ಸಾಹಿತ್ಯದಿಂದ ಕಾವ್ಯಮಯ ಸಾಹಿತ್ಯದವರೆವಿಗೆ ಬಹು ಅಮೂಲ್ಯವಾದ ಸ್ತೋತ್ರ ಮಾಲಿಕೆಗಳು ಲಭ್ಯವಿವೆ. ನಮ್ಮ ಅಗತ್ಯಗಳಿಗನುಗುಣವಾಗಿ ಆರಿಸಿ ಸಂಗ್ರಹಿಸಲಾಗಿದೆ. ಪದ್ಯರೂಪದ ಭಾಗಗಳನ್ನೂ ಸುಲಭ ಕನ್ನಡಕ್ಕೆ ಭಾಷಾಂತರಿಸಲಾಗಿದೆ.

ಈಗ್ಗೆ ಕೆಲವು ಮಾಸಗಳ ಹಿಂದೆ ವೇ.ಬ್ರ.ಶ್ರೀ. ವೆಂಕಟಸುಬ್ಬಾವಧಾನಿಗಳು ಲೋಕಾಭಿರಾಮವಾಗಿ ಮಾತನಾಡುತ್ತಿದ್ದಾಗ ಆಕಸ್ಮಿಕವಾಗಿ ಶ್ರೀ ಶಂಕರಭಗವತ್ಪಾದರ ದೇವೀ ಚತುಃಷಷ್ಟ್ಯುಪಚಾರ ಪೂಜೆಯತ್ತ ಮಾತು ತಿರುಗಿತು. ಅವರು ದೇವಿಗೆ ಆಚಾರ್ಯರು

ಹೇಳಿರುವ ರೀತಿಯಲ್ಲಿ ಪೂಜೆಸಲ್ಲಿಸಿ ಕೃತಕೃತ್ಯರಾಗಬೇಕೆಂದು ಸಂತೋಷದಿಂದ ಭಕ್ತಭಾವದಿಂದ ಮಾತನಾಡುತ್ತಿದ್ದರು. ಅವರ ಆ ಬಯಕೆ ನನ್ನ ಮನಸ್ಸಿನ ಮೇಲೆ ಬಹು ಪ್ರಭಾವ ಬೀರಿ ಇಂದಿನ ಈ ಕೃತಿಗೆ ಅಂದು ಪ್ರೇರಣೆಯಾಯಿತು.

ಶ್ರೀ ಪ್ರಮಾಥಿ ಸಂವತ್ಸರದ ಚೈತ್ರ ಶುದ್ಧ ಚತುರ್ದಶಿಯಲ್ಲಿನಡೆವ ದುರ್ಗಾಹೋಮ ಮತ್ತು ದೇವಿಬ್ರಹ್ಮೋತ್ಸವ ಸಮಾರಂಭಕ್ಕೆ ನಾನು ಹೋಗಿದ್ದಾಗ ಭಕ್ತಿಪರವಶನಾಗಿ ಆದಷ್ಟು ಬೇಗ ಈ ಕೆಲಸವನ್ನು ಮುಗಿಸಬೇಕೆಂದು ಬಯಸಿ ಪ್ರಾರಂಭಿಸಿದೆನು. ದೇವಿಯ ಕೃಪೆಯಿಂದ ಈ ಘಟ್ಟಕ್ಕೆ ಬಂದು ಸೇರಿದ್ದೇನೆ.

ಗ್ರಂಥದಲ್ಲಿ ಅಲ್ಲಲ್ಲಿ ವೇದಗಳು, ಉಪನಿಷತ್ತುಗಳು, ಪುರಾಣಗಳಿಂದ ದೊರೆಯುವ ಆಧಾರಗಳನ್ನು ಒದಗಿಸಿರುತ್ತೇನೆ. ಭಕ್ತ ಮಹನೀಯರು ಮೂಲವನ್ನು ಓದಿ ಪೂರ್ಣ ಅರ್ಥಗ್ರಹಣ ಮಾಡಿಕೊಳ್ಳಬೇಕು. ಎಲ್ಲವನ್ನೂ ಒಂದೆಡೆ ಸೇರಿಸಿ ಗ್ರಂಥರೂಪದಲ್ಲಿ ಸಂಗ್ರಹಿಸಲು ಸಾಧ್ಯವಾಗುವುದಿಲ್ಲ. ದೇವಿಯ ಮಾಹಾತ್ಮ್ಯೆಯು ಹಲವಾರು ಪುರಾಣಗಳಲ್ಲಿ ಪುನರುಕ್ತಿಯಾಗಿದೆ. ಆದುದರಿಂದ ಆರಂಭಕ್ಕೆ ಸಾರಾಂಶ ಮಾತ್ರ ನೀಡಲಾಗಿದೆ.

ಭಾರತದ ಎಲ್ಲೆಡೆ ದೇವಿಯ ಕ್ಷೇತ್ರಗಳಿವೆ. ಸುಮಾರು ಐವತ್ತೊಂದು ಕ್ಷೇತ್ರಗಳು ಬಹು ಪ್ರಧಾನವಾದವುಗಳು. ಒಂದೊಂದು ಭಾಗವೂ ದೇವಿಯ ಅಂಗದ ಒಂದೊಂದು ಭಾಗವನ್ನು ಪ್ರತಿನಿಧಿಸುತ್ತವೆ. ಆದುದರಿಂದ ಅವುಗಳ ವಿವರಣೆಯೇ ಒಂದು ದೊಡ್ಡ ಕೃತಿಯಾಗುತ್ತದೆ.

ಸಪ್ತಮಾತೃಕೆಯರು ದುಷ್ಟಶಕ್ತಿಯನ್ನು ನಾಶಮಾಡಲು ಅವತರಿಸಿದ ದೇವೀ ಶಕ್ತಿ. ಒಂದೊಂದು ಶಕ್ತಿಯೂ ಆಯಾ ಸನ್ನಿವೇಶಗಳಿಗನುಗುಣವಾಗಿ ಅವತರಿಸಿ ಆಯಾಯಾ ದುಷ್ಟ ಶಕ್ತಿಯನ್ನು ಸಂಹರಿಸಿದೆ. ಒಂದೊಂದರ ಗುಣ ಗಾನವೂ ಮತ್ತೊಂದು ಅವತಾರಕ್ಕೆ ಪೂರಕ ಆದುದರಿಂದ ಪುನರುಕ್ತಿ ಸಹಜವಾಗಿದೆ ಓದುಗರು ಮನ್ನಿಸಬೇಕಾಗಿ ಪ್ರಾರ್ಥನೆ.

ಸಪ್ತಮಾತೃಕೆಯರ ದೇವಾಲಯವು ಉತ್ತರ ಭಾರತದಿಂದ ದಕ್ಷಿಣದ ಎಲ್ಲೆಡೆ ಕಾಣ ಬರುತ್ತದೆ. ಪ್ರತಿ ದೇವಾಲಯದಲ್ಲಿಯೂ ಸಾಧಾರಣವಾಗಿ ಸಪ್ತಮಾತೃಕಾ ಪೂಜೆ, ದೇವಿ ಪೂಜೆ ಅಥವ ದುರ್ಗಾ ಪೂಜೆ ಎಂಬ ಹೆಸರಿನಿಂದ ನಡೆಯುತ್ತದೆ. ದಿನ ನಿತ್ಯದ ನೈವೇದ್ಯ ನಡೆವಾಗ ಸಪ್ತಮಾತೃಕೆಯರಿಗೂ ನೈವೇದ್ಯ ನೀಡಲು ದೇವಾಲಯಗಳಲ್ಲಿ ಸಪ್ತಮಾತೃಕಾ ಬಲಿ ಪೀಠಗಳನ್ನು ಕಾಣಬಹುದಾಗಿದೆ. (91ರ ಪುಟದಲ್ಲಿರುವ ಚಿತ್ರವನ್ನು ಗಮನಿಸಿ) ಆದುದರಿಂದ ಇದು ಇಡೀ ಭರತ ಖಂಡದಲ್ಲಿ ವ್ಯಾಪಿಸಿರುವ ಭಾರತ ವ್ಯಾಪಿ ಅನುಷ್ಠಾನ ಪದ್ಧತಿ.

ಕೆಲವು ಭಕ್ತರು ಸಪ್ತಮಾತೃಕೆಯರಿಗೇ ಮೀಸಲಾದ ಪ್ರಧಾನ ದೇವತೆಗಳಾಗಿರುವ ಬೇರೆ ಬೇರೆ ದೇವಾಲಯಗಳು ಎಲ್ಲೆಲ್ಲಿವೆ ? ಎಂದು ಪ್ರಶ್ನಿಸುತ್ತಾರೆ. ಈ ದಿಸೆಯಲ್ಲಿ ಇನ್ನು ಹೆಚ್ಚಿನ ಸಂಶೋಧನೆಯಾಗಬೇಕಾಗಿದೆ. ಚಾಮರಾಜನಗರದ ಜಿಲ್ಲೆಯಲ್ಲಿ ಕಾವೇರಿ

ಇತ್ತಿರುವ ಅತ್ಯಂತ ಬೆಲೆ ಬಾಳುವ ಮಹಾ ಸಂಪತ್ತು. ಈ ಸಂಪತ್ತನ್ನು ದೇಶಿ ಮಟ್ಟದ ಮಾನ್ಯತೆ ಪಡೆಯುವ ಪ್ರಯತ್ನ ನಡೆದಿದೆ. ಭವಿಷ್ಯದಲ್ಲಿ ಅದು ಸಫಲವಾದಾಗ ಉನ್ನತ ಮಟ್ಟದ ಮಾನ್ಯತೆ ಪಡೆದು ಈ ಮಾತೆಯರು ಲೋಕಕಲ್ಯಾಣದ ದಾರಿಯಲ್ಲಿ ಹೆಚ್ಚು ಜನರಿಗೆ ತನ್ನ ಅಭಯವನ್ನು ನೀಡುವಂತಾಗುವ ಕಾಲ ಬರಲಿದೆ., ಈ ಅಪೂರ್ವ ಸಂಪತ್ತು ಹೆಚ್ಚು ಜನೋಪಯೋಗಿಯಾಗಿ ಲೋಕಕಲ್ಯಾಣದಲ್ಲಿ ಸಹಭಾಗಿಯಾಗಲು ಅವಕಾಶವಿದೆ. ಈ ಕೃತಿಯ ರಚನೆಗೆ ಕಾರಣಳಾದ ಆ ಮಹಾಮಾತೆಗೆ ನಾನು ಹೇಗೆ ವಂದಿಸಲಿ. ಯಾವ ಕೈಗಳಿಂದ ಕೈಮುಗಿಯಲಿ, ಯಾವ ಮಾತಿನಿಂದ ಸ್ತುತಿಸಲಿ, ಯಾವ ಶಿರದಿಂದ ನಮಸ್ಕರಿಸಲಿ, ಸರ್ವಶಕ್ತಿಶಾಲಿನಿ ಆ ಮಹಾಮಾತೆಯು ಕೊರಡನ್ನೂ ಕೊನರಿಸಬಲ್ಲಳು. ಭಕ್ತರ ಕೈಸೇರಿ ದೇವಿಯ ಮಾಹಾತ್ಮ್ಯೆಯನ್ನು ಅರಿತು ಭಕ್ತರು ದೇವಿಕೃಪೆಗೆ ಪಾತ್ರರಾದಲ್ಲಿ ನಾನು 'ನಾರು ಹೂವಿನ ಜೊತೆ ಸ್ವರ್ಗ ಸೇರುತ್ತದೆ' ಎಂಬ ಗಾದೆಯಂತೆ ಮಹಾಶಕ್ತಿಯ ಕೃಪೆಯಿಂದಾಗಿ ನನ್ನ ಶ್ರಮವೂ ಸಾರ್ಥಕವಾಗುತ್ತದೆ. ನನ್ನ ಒಡಲಿನ ಈ ದುಡಿಮೆಯು ಪ್ರಯೋಜನ ವಾಗುತ್ತದೆ.

ಚಾಮರಾಜನಗರ ಜಿಲ್ಲೆಯಲ್ಲಿ ಮೈಸೂರು ಮತ್ತು ಚಾಮರಾಜನಗರದ ಮಾರ್ಗ ಮಧ್ಯದಲ್ಲಿ ತಿರುಮಕೂಡಲು ನರಸೀಪುರದಿಂದ ಮುಂದೆ ಕಮರವಾಡಿ ದೊರೆಯುತ್ತದೆ. ಹಿಂದೆ ಕಮಲ ಸರೋವರಗಳೂ, ತಟಾಕಗಳೂ ಕಂಡು ಬಂದುದರಿಂದ ಕಮಲವಾಟಿಕಾ ಎಂದು ಹೆಸರು ಪಡೆದಿದೆ. ದೇಶದ ಎಲ್ಲೆಡೆ ದೇವಿಯ ದೇವಾಲಯಗಳು ಸ್ಥಾಪನೆಗೊಂಡಿವೆ. ಆದರೆ ಸಪ್ತಮಾತೃಕೆಯರು ಪ್ರತ್ಯೇಕ ಪ್ರತ್ಯೇಕವಾಗಿ ಪ್ರಧಾನ ದೇವತೆಗಳಾಗಿರುವ ಕ್ಷೇತ್ರ ವಿರಳ, ಹಾಗೂ ಇರಲಾರದು ಎಂದೂ ಹೇಳಬಹುದೇನೋ.? ಇದೊಂದು ಮಹತ್ತರ ಕೊಡುಗೆ. ಹಾಗೇನಾದರೂ ಆದರೆ ಭಾರತದ ಪುಣ್ಯಕ್ಷೇತ್ರಗಳಲ್ಲಿ ಇದಕ್ಕೆ ಮಹತ್ತರವಾದ ಸ್ಥಾನ ದೊರೆಯುತ್ತದೆ.

ಐವತ್ತೊಂದು ದೇವಿಕ್ಷೇತ್ರಗಳಿವೆ. ಅವು ಭಾರತದ ರಾಷ್ಟ್ರೀಯ ಭಾವೈಕ್ಯತೆಗೆ ಭದ್ರಬುನಾದಿಯಾಗಿವೆ. ಕೆಲವು ಕ್ಷೇತ್ರಗಳನ್ನು ಇನ್ನೂ ಗುರುತಿಸಿಲ್ಲ. ಆ ದಿಸೆಯಲ್ಲಿ ಕೆಲಸವಾಗಬೇಕಾಗಿದೆ. ಅಂತಹ ಕ್ಷೇತ್ರಗಳಲ್ಲಿ ಇದು ಒಂದು ಹೇಳಲು ಆಧಾರಗಳಿವೆ. ಅಂತಹ ಆಧಾರಗಳ ಸಹಾಯದಿಂದ ಸ್ಥಿರೀಕರಿಸಿ ವಿದ್ವನ್ಮನ್ನಣೆ ಪಡೆಯುವಂತಾದರೆ ಅದೊಂದು ಅಪೂರ್ವ ರಾಷ್ಟ್ರಸಂಪತ್ತಾಗಿ ರಾಷ್ಟ್ರವ್ಯಾಪ್ತೀ ಕೀರ್ತಿಗೆ ಪಾತ್ರವಾಗಿ ದೇಶದ ಎಲ್ಲೆಡೆಯಿಂದ ಭಕ್ತರು ಆಗಮಿಸಿ ದೇವಿಯ ದರ್ಶನ ಪಡೆಯಲು ಸಹಾಯವಾಗುತ್ತದೆ.

ನನಗೆ ಆಗಾಗ್ಗೆ ಸಂದೇಹ ಬಂದಾಗ ಭಯ ಮತ್ತು ಭಕ್ತಿಯಿಂದ ಬರವಣಿಗೆ ನಿಲ್ಲುತ್ತಿತ್ತು. ಈ ವಿಷಯವನ್ನು ಹಿರಿಯರಲ್ಲಿ ನಿವೇದಿಸಿ ಕೊಂಡಾಗ ಧೈರ್ಯವಾಗಿ ಮುಂದುವರಿಯಲು ಹುರುಪು ತಂದರು. ನಾನು ಏನಾದರೂ ಲೋಪವಾದರೆ ಏನು

ನೆನಪಿಗೆ ತಂದು ನಮಗೆ ಗೊತ್ತಾಗದೆ ತಪ್ಪು ಮಾಡಿದರೆ ದೇವಿ ಮನ್ನಿಸುವಳೆಂದು ಧೈರ್ಯ ತುಂಬಿದರು. ಅದರಂತೆ ಮುದುವರಿದಿರುತ್ತೇನೆ. ಈ ದೇವೀ ಮಾಹಾತ್ಮ್ಯೆಯಲ್ಲಿ ಲೋಪಗಳು ಕಂಡುಬಂದರೆ ಹಿರಿಯರಾದ ಭಕ್ತಮಹನೀಯರು ಮನ್ನಿಸಬೇಕೆಂದು ವಿನೀತನಾಗಿ ಪ್ರಾರ್ಥಿಸುತ್ತೇನೆ.

ಸಪ್ತಮಾತೃಕೆಯರ ಚಿತ್ರಗಳ ಪಡಿಯಚ್ಚನ್ನು ತೆಗೆಯಲು ಮೈಸೂರಿನ ಪ್ರಾಚ್ಯವಿದ್ಯಾ ಸಂಶೋಧನಾಲಯದ ನಿರ್ದೇಶಕರಾದ ಶ್ರೀ ಡಾ. ಕೆ. ವಿ. ರಮೇಶ್‌ರವರು ಅನುಮತಿ ಇತ್ತಿದ್ದಾರೆ ಅದಕ್ಕಾಗಿ ಸಹಾಯ ಮಾಡಿದ ಉಪನಿರ್ದೇಶಕರಾದ ವಿದ್ವಾನ್ ಶ್ರೀ ಆರ್.ಜಿ. ಮಾಳಗಿ ಯವರು ನನಗೆ ಬೇಕಾದ ಎಲ್ಲ ಸಹಾಯವನ್ನು ಒದಗಿಸಿದ್ದಾರೆ ಆ ಹಿರಿಯ ಅಧಿಕಾರಿಗಳಿಗೆ ನನ್ನ ಹೃತ್ಪೂರ್ವಕ ನಮಸ್ಕಾರಗಳು.

ಗ್ರಂಥಗಳನ್ನು ಸಂಗ್ರಹಿಸುವುದು ಸುಲಭವಾದ ಕೆಲಸವಲ್ಲ ಆದರೆ ಅದನ್ನು ಸುಲಭ ಮಾಡಿದವರು ಪ್ರಾಚ್ಯ ವಿದ್ಯಾಸಂಶೋಧನಾಲಯದ ಗ್ರಂಥಪಾಲರಾದ ಶ್ರೀ ಕೆ.ವಿ. ರಾಮಕೃಷ್ಣರವರು. ಅವರೂ ದೈವಭಕ್ತರು, ದೈವಭಕ್ತಿ ಪ್ರಣೀತವಾದ ಈ ಕೃತಿಯ ರಚನೆಗೆ ಗ್ರಂಥ ಬಂಡಾರದಲ್ಲಿರುವ ಗ್ರಂಥಗಳನ್ನು ಸುಲಭವಾಗಿ ದೊರೆಯುವಂತೆ ಮಾಡಿ ಉಪಕರಿಸಿದ್ದಾರೆ ಅವರಿಗೆ ನನ್ನ ನಮಸ್ಕಾರಗಳು. ಇದೇ ಸಂಶೋಧನಾಲಯದ ಶ್ರೀಮತಿ. ಬಿ. ಮಮತಾ ಮತ್ತು ಶ್ರೀಮತಿ ಕಾವೇರಮ್ಮ ವನರು ಪಡಿಯಚ್ಚು ತೆಗೆಯಲು ಶ್ರದ್ಧೆಯಿಂದ ಸಹಾಯ ಮಾಡಿದ್ದಾರೆ ಅವರಿಗೆ ನನ್ನ ನಮಸ್ಕಾರಗಳು. ಚಿತ್ರಗ್ರಾಹಕರಾದ ಶ್ರೀ ಎಸ್. ಸುರೇಶ್ ರವರು ಶ್ರಮವಹಿಸಿ ಚಿತ್ರಗಳನ್ನು ಚಿತ್ರೀಕರಿಸಿ ಉಪಕಾರ ಮಾಡಿದ್ದಾರೆ. ಅವರಿಗೆ ದೇವಿಯ ಕೃಪೆ ದೊರೆಯಲೆಂದು ಪ್ರಾರ್ಥಿಸುತ್ತೇನೆ.

ಪ್ರಾಚ್ಯವಿದ್ಯಾಸಂಶೋಧನಾಲಯದ ಹಿರಿಯ ಸಂಶೋಧನಕಾರರಾದ ವಿದ್ವಾನ್ ಡಾ || ಟಿ.ವಿ. ಸತ್ಯನಾರಾಯಣರವರು ಪೂರ್ಣ ಸಲಹೆ ನೀಡಿದ್ದಾರೆ ಮತ್ತು ಕರಡು ಪ್ರತಿಯನ್ನು ಓದಿ ಪರಿಷ್ಕರಿಸಿರುತ್ತಾರೆ. ಮೈಸೂರು ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗದ ಭೋದಕರಾದ ಡಾ|| ಅನಂತ ನಾಗೇಂದ್ರ ಭಟ್ ರವರು ಪ್ರತಿಯನ್ನು ತಿದ್ದಿ ರೂಪು ತಂದಿದ್ದಾರೆ. ಸಪ್ತಮಾತೃಕಾ ದೇವಾಲಯದ ಹಲವಾರು ಚಿತ್ರಗಳನ್ನು ಕಮಲವಾಟಿಕಾ, ಸಪ್ತಮಾತೃಕಾ ದೇವಾಲಯದ ಧರ್ಮದರ್ಶಿ ಸಭೆಯ ಸದಸ್ಯರುಗಳಾದ ಶ್ರೀ ಎಸ್. ಕಲ್ಲೇಶ್, ಶ್ರೀ ಕೆ. ವರದರಾಜು ಮತ್ತು ಶ್ರೀ ವಿ. ಜಯರಾಮ್‌ರವರು ಒದಗಿಸಿಕೊಟ್ಟು ಉಪಕಾರ ಮಾಡಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ದೇವಿಯು ಅವರಿಗೆ ಸಕಲ ಸನ್ಮಂಗಳವನ್ನೂ ಉಂಟುಮಾಡಲೆಂದು ಪ್ರಾರ್ಥಿಸುತ್ತೇನೆ.

ಗ್ರಂಥದ ಬರವಣಿಗೆ ಮುಗಿದು ಪಡಿಯಚ್ಚಿನ ಕರಡು ಪ್ರತಿಯನ್ನು ದಕ್ಷಿಣಾಮ್ನಾಯ ಶ್ರೀ ಶಾರದಾ ಪೀಠ, ಶ್ರೀ ಶಂಕರಾಚಾರ್ಯ ಮಹಾಸಂಸ್ಥಾನಮ್ ಶೃಂಗೇರಿಯಲ್ಲಿ

ವಿರಾಜಮಾನರಾಗಿರುವ ಜಗದ್ಗುರು ಶ್ರೀ ಶ್ರೀ ಭಾರತೀ ತೀರ್ಥ ಮಹಾಸ್ವಾಮಿಗಳವರ [illegible] ಸನ್ನಿಧಾನದಲ್ಲಿ ಸಮರ್ಪಿಸಿದೆ. ಜ್ಞಾನ ಭಾಸ್ಕರರಾದ ಜಗದ್ಗುರುಗಳು ಗ್ರಂಥದ [illegible] ಆಶೀರ್ವದಿಸಿದ್ದಾರೆ. ಮಹಾ ತಪಸ್ವಿಗಳಿಗೆ ನನ್ನ ಅನಂತಾನಂತ ನಮಸ್ಕಾರಗಳನ್ನು ಭಕ್ತಿಪೂರ್ವಕವಾಗಿ ಸಮರ್ಪಿಸುತ್ತೇನೆ. ನನ್ನ ಎಲ್ಲಾ ಗ್ರಂಥಗಳಿಗೂ ಅವರ [illegible] ದಿವ್ಯ ಪ್ರೇರಣಾ ಶಕ್ತಿ, ಅವರ ಪಾದದೂಳಿಯೇ ಗಂಗಾ ಸ್ನಾನ, ದಿವ್ಯನಾಮ [illegible] ಜಪ, ದಿವ್ಯರೂಪದ ದರ್ಶನವೇ ಮೋಕ್ಷದಾಯಕ. ಅಂತಹ ದಿವ್ಯ ಶಕ್ತಿಗೆ [illegible] ಮೊದಲನೆಯದಾಗಿ ನನ್ನ ಭಕ್ತಿಪೂರ್ವಕ ನಮಸ್ಕಾರಗಳನ್ನು ಮತ್ತೆ ಮತ್ತೆ ಸಮರ್ಪಿಸುತ್ತೇನೆ.

ಮೈಸೂರು ಶ್ರೀರಾಮಕೃಷ್ಣ ಮಠದ ಹಿರಿಯ ಸನ್ಯಾಸಿಗಳಾದ ಸ್ವಾಮಿ ನಿತ್ಯ ಸ್ಥಾನಂದರವರು ತಪಸ್ವಿಗಳು. ನನಗೆ ಈ ಗ್ರಂಥದ ಮುನ್ನುಡಿಯನ್ನು [illegible] ಉಪಾಸಕರಿಂದ ಬರೆಸಬೇಕೆಂದು ಆಶಿಸುತ್ತಿದ್ದೆನು. ನನ್ನ ಮನದಳಲು ದೇವಿಗೆ [illegible] ಯತಿವರೇಣ್ಯರಿಂದ ಅದನ್ನು ನೆರವೇರಿಸಿದ್ದಾಳೆ.

ಸ್ವಾಮಿಗಳ ದರ್ಶನವಾದಾಗಲೆಲ್ಲಾ ಅವರು ತೋರುವ ಪ್ರೀತಿ, [illegible] ಅವರಲ್ಲಿ ಇನ್ನೂ ಗೌರವವನ್ನು ಹೆಚ್ಚಿಸಿದೆ. ಮುನ್ನುಡಿಯನ್ನು ಅನುಗ್ರಹಿಸಿ ಗ್ರಂಥದ ಹಿರಿಮೆಯನ್ನು ಹೆಚ್ಚಿಸಿದ್ದಾರೆ. ಅವರ ಪಾದಾರವಿಂದಗಳಲ್ಲಿ ನನ್ನ ಅನಂತ ನಮಸ್ಕಾರಗಳನ್ನು ಸಮರ್ಪಿಸುತ್ತೇನೆ.

ತಿರುಪತಿ-ತಿರುಮಲ ದೇವಸ್ಥಾನದ ಸಮಿತಿಯವರ ಉದಾರ ಸಹಾಯವಿಲ್ಲದಿದ್ದರೆ ಇದು ಸದ್ಯಕ್ಕೆ ಹೊರಬರುತ್ತಿರಲಿಲ್ಲ. ಅವರೆಲ್ಲರಿಗೂ ನನ್ನ ಮನಃಪೂರ್ವಕ ನಮಸ್ಕಾರಗಳು.

ಶ್ರಮ ವಹಿಸಿ ಮೈಸೂರು ಉದಯರವಿ ಆಫ್‌ಸೆಟ್ ಪ್ರಿಂಟರ್ಸ್ ರವರು ಮುದ್ರಣ ಕಾರ್ಯವನ್ನು ನೆರವೇರಿಸಿರುತ್ತಾರೆ. ಅವರ ಪೂರ್ಣ ಸಹಕಾರ ದೊರೆಯದಿದ್ದರೆ [illegible] ಶ್ರಮವಾಗಿರುತ್ತಿತ್ತು. ಅವರ ಶ್ರಮವನ್ನು ದೇವಿಯು ಮನ್ನಿಸಿ ಸಕಲ ಸನ್ಮಂಗಳವನ್ನು ತರಲೆಂದು ಪ್ರಾರ್ಥಿಸುತ್ತೇನೆ.

ಕೆ. [illegible]

ಶ್ರೀಃ

ಗೌರೀಪುತ್ರನಮಸ್ತೇಽಸ್ತು ಶಂಕರಪ್ರಿಯಪುತ್ರಕ |
ನಮಸ್ತೇ ದೇವದೇವೇಶ ನಮಸ್ತೇ ಗಣನಾಯಕ ||

ಓಂ ನಮೋ ದೇವ್ಯೈ ಮಹಾದೇವ್ಯೈ ಶಿವಾಯೈ ಸತತಂ ನಮಃ |
ನಮಃ ಪ್ರಕೃತ್ಯೈ ಭದ್ರಾಯೈ ನಿಯತಾಃ ಪ್ರಣತಾಃ ಸ್ಮ ತಾಮ್ ||

ದೇವಿ ಪ್ರಪನ್ನಾರ್ತಿಹರೇ ಪ್ರಸೀದ
ಪ್ರಸೀದ ಮಾತರ್ಜಗತೋಽಖಿಲಸ್ಯ |
ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರೀ ದೇವಿ ಚರಾಚರಸ್ಯ ||

ಮಂತ್ರಾಣಾಂ ಮಾತೃಕಾದೇವೀ ಶಬ್ದಾನಾಂ ಜ್ಞಾನರೂಪಿಣೀ |
ಜ್ಞಾನಾನಾಂ ಚಿನ್ಮಯಾನಂದಾ ಶೂನ್ಯಾನಾಂ ಶೂನ್ಯಸಾಕ್ಷಿಣೀ ||

ತೇ ಸಂಮತಾ ಜನಪದೇಷು ಧನಾನಿ ತೇಷಾಂ
ತೇಷಾಂ ಯಶಾಂಸಿ ನ ಚ ಸೀದತಿ ಧರ್ಮವರ್ಗಃ |
ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ
ಯೇಷಾಂ ಸದಾಽಭ್ಯುದಯದಾ ಭವತೀ ಪ್ರಸನ್ನಾ ||

## ಅಧ್ಯಾಯ - ೧

# ಪ್ರಾತಃ ಸ್ಮರಣಮ್

ಪ್ರಾತಃ ಸ್ಮರಾಮಿ ಶರದಿಂದು ಕರೋಜ್ಜ್ವಲಾಭಾಂ
ಸದ್ರತ್ನವನ್ಮಕರಕುಂಡಲಹಾರಭೂಷಾಮ್ |
ದಿವ್ಯಾಯುಧೋದ್ಯೈತಸುನೀಲಸಹಸ್ರಹಸ್ತಾಂ
ರಕ್ತೋತ್ಪಲಾಭಚರಣಾಂ ಭವತೀಂ ಪರೇಶಾಮ್ || ||೧||

ಪ್ರಾತರ್ನಮಾಮಿ ಮಹಿಷಾಸುರಚಂಡಮುಂಡ
ಶುಂಭಾಸುರಪ್ರಮುಖದೈತ್ಯವಿನಾಶದಕ್ಷಾಮ್ |
ಬ್ರಹ್ಮೇಂದ್ರರುದ್ರಮುನಿಮೋಹನಶೀಲಲೀಲಾಂ
ಚಂಡೀಂ ಸಮಸ್ತಸುರಮೂರ್ತಿಮನೇಕರೂಪಾಮ್ || ||೨||

ಪ್ರಾತರ್ಭಜಾಮಿ ಭಜತಾಮಭಿಲಾಷದಾತ್ರೀಂ
ಧಾತ್ರೀಂ ಸಮಸ್ತಜಗತಾಂ ದುರಿತಾಪಹಂತ್ರೀಮ್ |
ಸಂಸಾರಬಂಧನವಿಮೋಚನಹೇತುಭೂತಾಂ
ಮಾಯಾಂ ಪರಾಂ ಸಮಧಿಗಮ್ಯ ಪರಸ್ಯ ವಿಷ್ಣೋಃ || ||೩||

ಬ್ರಹ್ಮಾಣೀ ಕಮಲೇಂದು ಸೌಮ್ಯವದನಾ ಮಾಹೇಶ್ವರೀ ಲೀಲಯಾ
ಕೌಮಾರೀ ರಿಪುದರ್ಪನಾಶನಕರೀ ಚಕ್ರಾಯುಧಾ ವೈಷ್ಣವೀ |
ವಾರಾಹೀ ಘನಘೋರದರ್ದರಮುಖೀ ದ್ರಂಷ್ಟ್ರೀ ಚ ವಜ್ರಾಯುಧಾ
ಚಾಮುಂಡಾ ಗಣನಾಥರುದ್ರಸಹಿತಾ ರಕ್ಷಂತು ಮಾಮ್ ಮಾತರಃ||
||೪||

ಓಂ ಶ್ರೀ ಗಣೇಶಾಯ ನಮಃ
ಓಂ ಶ್ರೀ ಸರಸ್ವತ್ಯೈ ನಮಃ
ಓಂ ಶ್ರೀ ಶಾರದಾಯ್ಯೈ ನಮಃ
ಓಂ ಶ್ರೀ ಸಪ್ತಮಾತೃಕಾಯ್ಯೈ ನಮಃ
ಓಂ ಶ್ರೀ ಶಂಕರಭಗವತ್ಪಾದಗುರುಭ್ಯೋನಮಃ
ಓಂ ಶ್ರೀ ಶ್ರೀ ಭಾರತೀತೀರ್ಥಗುರುಭ್ಯೋ ನಮಃ



ಶೃಂಗೇರಿದೇವಿ ಶ್ರೀ ಶಾರದೆ

ಅಧ್ಯಾಯ -೨

# ಪೂಜೆಯ ಅವಶ್ಯಕತೆ

*ಜಗದ್ಗುರು ಶ್ರೀಮದಭಿನವವಿದ್ಯಾತೀರ್ಥಮಹಾಸ್ವಾಮಿಗಳವರ ಅನುಗ್ರಹ ಭಾಷಣ*



ನಾವು ಮನಸ್ಸಿಗೇ ಅಧೀನರು. ಮನಸ್ಸನ್ನು ನಿಗ್ರಹಿಸುವುದು ಕಷ್ಟವೆಂಬುದರಲ್ಲಿ ಸಂಶಯವಿಲ್ಲ. ಯೋಗಿಯು ಆಸನ - ಪ್ರಾಣಾಯಾಮ - ಪ್ರತ್ಯಾಹಾರಾದಿಗಳಿಂದ ಮನಸ್ಸಿಗೆ ಏಕಾಗ್ರತೆಯನ್ನು ಸಾಧಿಸಿ ಧ್ಯಾನ ಮಗ್ನನಾಗುತ್ತಾನೆ. ಯಾರಿಗೆ ಹೀಗೆ ಧ್ಯಾನ ನಿಷ್ಠೆಯು ಮಾಡಲಸಾಧ್ಯವೋ ಅವರಿಗೆ ಭಗವಂತನ ಬಾಹ್ಯಪೂಜೆಯು ಆವಶ್ಯಕ. ಭಗವಂತನ ಪೂಜಾ ವಿಧಿಗಳು ಅನೇಕವಿದ್ದು ಅವುಗಳಲ್ಲಿ ಪಂಚಾಯತನಪೂಜೆಯೂ ಒಂದು. ವಿಶಿಷ್ಟವಾದ ಶ್ರೀಪಂಚಾಯತನ ಪೂಜೆಯು ಶ್ರೀಮಚ್ಛಂಕರಭಗವತ್ಪಾದಾಚಾರ್ಯರಿಂದ ಉಪದೇಶಿಸಲ್ಪಟ್ಟಿದೆ.

'ಕೇಶವನಾಗಲೀ ಶಿವನಾಗಲೀ ದೇವನೊಬ್ಬ' ಎಂದಿದ್ದರೂ ಐದು ದೇವತೆಗಳ ಪೂಜೆ ಏಕೆ ವಿಧಿಸಿದ್ದಾರೆ ಎಂಬ ಪ್ರಶ್ನೆ ಏಳುತ್ತದೆ. ಶಿವ, ಶಕ್ತಿ, ಸೂರ್ಯ, ಗಣಪತಿ ಮತ್ತು ವಿಷ್ಣು ಪೂಜೆಯಿಂದ ದೇವರ ವಿಚಾರದಲ್ಲಿ ಭೇದಬುದ್ಧಿ ಅಳಿಯುತ್ತದೆ. ನಿರ್ಗುಣಪರಬ್ರಹ್ಮನ ಆರಾಧನೆ ಸಿದ್ಧಿಸುತ್ತದೆ.

ಮಾಡಬೇಕಾದ ಕಾರ್ಯವನ್ನು ವಿಧಿಯಂತೆ ಮಾಡಬೇಕು. ಅನೇಕ ಪೂಜಾ ವಿಧಾನಗಳಿದ್ದರೂ ಷೋಡಶೋಪಚಾರಪೂಜಾವಿಧಾನವು ವಿಶೇಷಫಲಪ್ರದ. ಹೀಗೆ ಈ ಜನ್ಮದಲ್ಲಿ ಪರಮೇಶ್ವರನನ್ನು ಪೂಜಿಸುವುದರಿಂದ ಎಲ್ಲರೂ ಶ್ರೇಯಸ್ಸನ್ನು ಹೊಂದಲು ಸಂಸಾರಸಾಗರವನ್ನು ದಾಟಿ ಭಗವಂತನಲ್ಲಿ ಐಕ್ಯಹೊಂದಿ, ಪುನರ್ಜನ್ಮ ರಹಿತರಾಗಲು ಸಮರ್ಥರಾಗುತ್ತಾರೆ.



# ವಿಗ್ರಹಾರಾಧನೆ

*(ಜಗದ್ಗುರು ಶ್ರೀಮದ್‌ಭಾರತೀತೀರ್ಥಮಹಾಸ್ವಾಮಿಗಳವರ ಅನುಗ್ರಹಭಾಷಣ)*

ಭಗವಂತನು ಸರ್ವವ್ಯಾಪಿಯಾಗಿದ್ದರೂ ವಿಧಿವತ್ತಾಗಿ ಪ್ರತಿಷ್ಠಾಪಿಸಿ ಪೂಜಿಸಲ್ಪಟ್ಟ ವಿಗ್ರಹಗಳಲ್ಲಿ ಆತನ ಸಾನ್ನಿಧ್ಯವು ವಿಶೇಷ ವಾಗಿರುತ್ತವೆ. ಅವುಗಳಿಗೆ



ಸಮರ್ಪಿಸುವ ಪೂಜೆ, ಪ್ರಾರ್ಥನೆ ಮೊದಲಾದವು ಸಫಲವಾಗುತ್ತವೆ. ಅನೇಕಾನೇಕ ಸಾವಿರಾರು ದೇವತಾಮೂರ್ತಿಗಳಿರುವಾಗ ಯಾವ ದೇವರನ್ನು ಆಶ್ರಯಿಸಬೇಕು ? ಎಂದು ಕೆಲವರಿಗೆ ಸಂಶಯವುಂಟಾಗುತ್ತದೆ. ಇಲ್ಲಿ ಇದೋ ಅದೋ ಎನ್ನಲು ಅವಕಾಶವೇ ಇಲ್ಲ. ಶಾಸ್ತ್ರಗಳೋ ಸನಾತನಧರ್ಮವೋ ದೇವನೊಬ್ಬನೇ ಎಂದು ಉದ್ಘೋಷಿಸುತ್ತಿವೆ. "ಒಬ್ಬನೇ ದೇವನು ಎಲ್ಲ ಪ್ರಾಣಿ ಗಳಲ್ಲೂ ಗೂಢನಾಗಿದ್ದು ಸರ್ವವ್ಯಾಪಕನೂ, ಎಲ್ಲ ಪ್ರಾಣಿಗಳಲ್ಲೂ ವಾಸಿಸುವವನೂ, ಸಾಕ್ಷಿಯೂ, ಒಬ್ಬನೂ, ಕೇವಲನೂ, ನಿರ್ಗುಣನೂ, ಆಗಿದ್ದಾನೆ" ಎಂದು ಉಪನಿಷತ್ತುಗಳು ಹೇಳುತ್ತವೆ.

ದೇವನೊಬ್ಬನೇ ಆದರೂ, ಅನೇಕ ನಾಟಕಗಳಲ್ಲಿ ಒಬ್ಬನೇ ನಟ ಬೇರೆ ಬೇರೆ ಪಾತ್ರಗಳನ್ನು ವಹಿಸುವಂತೆ, ನಾನಾ ರೂಪಗಳನ್ನು ಧರಿಸುತ್ತಾನೆ. ದೇವನು ತಾನೇ ಶ್ರೀಕೃಷ್ಣ - ರಾಮ - ಈಶ್ವರ - ದೇವಿ - ಗಣಪತಿ ಮೊದಲಾದ ರೂಪಗಳಲ್ಲಿ ಪ್ರಕಟನಾಗುತ್ತಾನೆ. ಭಕ್ತರನ್ನು ಅನುಗ್ರಹಿಸಲು ಯಾವ ರೂಪವನ್ನಾದರೂ ಧರಿಸಲು ಆತ ಶಕ್ತನಾಗುತ್ತಾನೆ. ಆತನ ಶಕ್ತಿಯಾದರೋ ಅಪರಿಮಿತವಾದುದು. ಆತ ಸರ್ವಶಕ್ತ, ಸತ್ಯಸಂಕಲ್ಪ ಮತ್ತು ಸರ್ವಜ್ಞ. ಹೊರಗಿನ ರೂಪದಲ್ಲಿ ಭೇದವನ್ನು ಕಾಣಬಹುದೇ ಹೊರತು ಒಳಗಿನ ಚೈತನ್ಯದಲ್ಲಿಲ್ಲ.

ಶ್ರೀಮಚ್ಛಂಕರಭಗವತ್ಪಾದರು ಪರಮಾತ್ಮನ ವಿವಿಧ ರೂಪಗಳ ಆರಾಧನೆಯನ್ನು ಉಪದೇಶಿಸಿದ್ದಾರೆ. ಶ್ರೀಮದಾಚಾರ್ಯರಉಪದೇಶವನ್ನು ಶ್ರೇಯಸ್ಸಿಗಾಗಿ ಪಾಲಿಸಬೇಕು.



## ಶ್ರೀ ಶಂಕರಭಗವತ್ಪಾದರು

ಶ್ರೀ ಶಂಕರಭಗವತ್ಪಾದರು ಈಗಿನ ಮಲಯಾಳ ದೇಶದ (ಕೇರಳ) ಎರ್ನಾಕುಲಂ ಜಿಲ್ಲೆಯಲ್ಲಿರುವ ವೇದವಿದ್ಯಾಪಾರಂಗತರಿಂದ ಸಂಪನ್ನವಾದ ಊರಿನಲ್ಲಿದ್ದ ಕಾಲಟಿ ಎಂಬ ಅಗ್ರಹಾರದಲ್ಲಿ ಕ್ರಿ.ಶ 788ರ ವೈಶಾಖ ಶುದ್ಧ ಪಂಚಮಿಯ ಶುಭದಿನ ಅವತರಿಸಿದರು.

ಬಹುಬಾಲ್ಯದಲ್ಲಿಯೇ ಸನ್ಯಾಸವನ್ನು ಸ್ವೀಕರಿಸಿ ಅಖಂಡಭಾರತವನ್ನು ಮೂರು ಸಾರಿ ಕಾಲು ನಡಿಗೆಯಿಂದ ನಡೆದು ಅಂದು ಪ್ರಚಲಿತವಿದ್ದ ಸುಮಾರು ನೂರ ಅರವತ್ತು ಭಿನ್ನ ಭಿನ್ನ ಪಂಥದ ಸಂಪ್ರದಾಯದವರೊಂದಿಗೆ ವಾದಿಸಿ ಅವರನ್ನು ವೇದ ಮತಾನುಯಾಯಿಗಳನ್ನಾಗಿ ಮಾಡಿದರು. ಸರ್ವಮತಗಳನ್ನೂ ಸಮನ್ವಯಗೊಳಿಸಿ ಷಣ್ಮತಗಳನ್ನು ರೂಢಿಸಿ ಧರ್ಮಪ್ರತಿಷ್ಠಾಪನೆಗೆ ತಳಪಾಯ ಹಾಕಿದರು.

"ಸರ್ವದೇವ ನಮಸ್ಕಾರಃ ಕೇಶವಂ ಪ್ರತಿಗಚ್ಛತಿ " ಎಂಬಂತೆ ಯಾವ ದೇವರನ್ನು ಯಾವ ನಾಮದಿಂದ, ಯಾವ ರೂಪದಿಂದ ಪೂಜಿಸಿದರೂ ಅದು ಒಂದೇ ದೇವನನ್ನು ವಂದಿಸಿದಂತೆ ಎಂಬ ವೇದತತ್ತ್ವವನ್ನು ಪ್ರಚುರ ಪಡಿಸಿದರು.

ದೇಶದ ಮೂಲೆ ಮೂಲೆಗೂ ನಡೆದು ಋಷಿಮುನಿಗಳಿಂದ ಸ್ಥಾಪಿತವಾಗಿದ್ದ ದಿವ್ಯಕ್ಷೇತ್ರಗಳಿಗೆ ದರ್ಶನವಿತ್ತು ಆಯಾಯಾ ಕ್ಷೇತ್ರದ ಮಹಿಮೆಗೆ ತಕ್ಕಂತೆ ಪೂಜಾ ವಿಧಿವಿಧಾನಗಳನ್ನು ಸರಿಪಡಿಸಿದರು. ಅಗತ್ಯ ಪೂಜೆಯಲ್ಲೆಲ್ಲಾ ಸ್ತೋತ್ರ ಪಾಠಗಳನ್ನು ರಚಿಸಿ ದೇವತೆಗಳನ್ನು ಅರ್ಚಿಸಿದರು.

ಶ್ರೀಮದಾಚಾರ್ಯರು ಸುಮಾರು 400 ಕೃತಿಗಳ ರಚನೆ ಮಾಡಿ ಭಕ್ತ ಕೋಟಿಯನ್ನು ಉದ್ಧಾರ ಮಾಡಿದ್ದಾರೆ. ಅದರಲ್ಲಿ ಸುಮಾರು ಹತ್ತೊಂಬತ್ತು ದೇವೀ ಸ್ತೋತ್ರಗಳನ್ನು ರಚಿಸಿ ನಮ್ಮನ್ನು ಉದ್ಧರಿಸಿದ್ದಾರೆ. ಬಹು ಬಾಲ್ಯದಲ್ಲಿಯೇ ಬಿಕ್ಷಾಟನೆಯನ್ನು ಮಾಡುತ್ತಿದ್ದಾಗ ಓರ್ವ ಗೃಹಸ್ಥಳು ಏನೂ ಇಲ್ಲದಿದ್ದಾಗ ಕೇವಲ ಕೆಲವು ನೆಲ್ಲಿಕಾಯಿಗಳನ್ನು ಭಿಕ್ಷಾ ಪಾತ್ರೆಗೆ ಬಹು ಭಕ್ತಿಯಿಂದ ಸಮರ್ಪಿಸಿದಳು. ಕರುಣಾಮಯಿಯಾದ ಶಂ + ಕರರು ಮಹಾಲಕ್ಷ್ಮಿಯ ಸ್ತೋತ್ರಮಾಡಿ ಆ ಗೃಹಸ್ಥನ ಮನೆಯ ದಾರಿದ್ರ್ಯವನ್ನು ಶಾಶ್ವತವಾಗಿ ನಿವಾರಿಸಿದರು.

ದೇಶ ದೇಶದ ಪ್ರಯಾಣಕಾಲದಲ್ಲಿ ಅವರು ದರ್ಶಿಸದ ಪವಿತ್ರ ಕ್ಷೇತ್ರಗಳಿಲ್ಲ, ಪೂಜಿಸದ ದೈವವಿಲ್ಲ. ರಚಿಸದ ಶ್ಲೋಕಮಾಲೆಗಳಿಲ್ಲ. ಹಾಗೆ ರಚಿಸಿದ ಸ್ತೋತ್ರ ಮಾಲಿಕೆಯಲ್ಲಿ ದೇವೀಚತುಃಷಷ್ಟ್ಯುಪಚಾರಪೂಜಾಸ್ತೋತ್ರವೂ ಒಂದು.

## ಆಚಾರ್ಯರು ರಚಿಸಿರುವ ದೇವೀ ಸ್ತೋತ್ರಗಳು

೧. ಸೌಂದರ್ಯಲಹರೀ
೨. ದೇವೀಭುಜಂಗಸ್ತೋತ್ರ
೩. ಆನಂದಲಹರೀ
೪. ತ್ರಿಪುರಸುಂದರೀವೇದಪಾದಸ್ತೋತ್ರ
೫. ತ್ರಿಪುರಸುಂದರೀಮಾನಸಪೂಜಾಸ್ತೋತ್ರ
೬. ದೇವೀಚತುಃಷಷ್ಟ್ಯುಪಚಾರಪೂಜಾಸ್ತೋತ್ರ
೭. ತ್ರಿಪುರಸೌಂದರ್ಯಾಷ್ಟಕ
೮. ಲಲಿತಾಪಂಚರತ್ನ
೯. ಕಲ್ಯಾಣವೃಷ್ಟಿಸ್ತವ
೧೦. ನವರತ್ನಮಾಲಿಕಾ
೧೧. ಮಂತ್ರಮಾತೃಕಾಪುಷ್ಪ ಮಾಲಾ
೧೨. ಗೌರೀದಶಕ
೧೩. ಭವಾನೀಭುಜಂಗ
೧೪. ಕನಕಧಾರಾಸ್ತೋತ್ರ
೧೫. ಅನ್ನಪೂರ್ಣಾಷ್ಟಕ
೧೬. ಮೀನಾಕ್ಷಿಪಂಚರತ್ನ
೧೭. ಮೀನಾಕ್ಷಿಸ್ತೋತ್ರ
೧೮. ಭ್ರಮರಾಂಬಿಕಾಷ್ಟಕ
೧೯. ಶಾರದಾಭುಜಂಗಪ್ರಯಾತಾಷ್ಟಕ

ಶ್ರೀ ಶಂಕರಭಗವತ್ಪಾದರು ದೇವಿಯನ್ನು ಹಲವಾರು ರೀತಿಯಲ್ಲಿ ಪೂಜಿಸಿದ್ದಾರೆ. ಸೌಂದರ್ಯಲಹರಿಯಲ್ಲಿ ದೇವಿಯ ಸರ್ವಶಕ್ತಿಯನ್ನೂ ಅವಳ ಸಾರ್ವಭೌಮತ್ವವನ್ನು ಸ್ತುತಿಸಿದ್ದಾರೆ.

ಲಲಿತಾತ್ರಿಶತಿಭಾಷ್ಯದಲ್ಲಿ ದೇವಿಯ ವಿವಿಧರೂಪಗಳ ಮಹಿಮೆಯನ್ನೂ ಅವಳ ಅಸ್ತಿತ್ವವನ್ನೂ ಭಕ್ತರ ಮನಮುಟ್ಟುವಂತೆ ಚಿತ್ರಿಸಿರುತ್ತಾರೆ. ಉಳಿದಿರುವ ದೇವೀ ಸ್ತೋತ್ರಗಳಲ್ಲಿ ಅವರು ಅಲ್ಲಲ್ಲಿ ದರ್ಶನವಿತ್ತ ವಿವಿಧ ರೂಪಗಳ ವರ್ಣನೆಯನ್ನು ವಿವಿಧರೂಪದಲ್ಲಿ ಚಿತ್ರಿಸಿರುತ್ತಾರೆ. ಯಾವುದೇ ಹೆಸರಿನಿಂದ ಯಾವುದೇ ರೀತಿ ಚಿತ್ರಿಸಿದರೂ ಎಲ್ಲವೂ ಒಂದೇ ಮುಖದ ಹಲವು ರೀತಿಗಳು ಎಂಬಂತೆಯೂ, ಒಂದೇ ಮಹಾಶಕ್ತಿಯ ವಿವಿಧ ಬಗೆಗಳು ಎಂಬಂತೆಯೂ ವರ್ಣಿಸಿರುತ್ತಾರೆ.

ದೇವರನ್ನು ನಾವು ಸರ್ವಶಕ್ತ, ಸರ್ವಾಂತರ್ಯಾಮಿ ಎಂದು ಹೇಳುತ್ತೇವೆ. ಹಾಗಾದರೆ ದೇವರು ಒಬ್ಬನೇ ಎನ್ನುವುದಾದರೆ ದೇವರು ಪುರುಷಸ್ವರೂಪನೇ ?

ಅಥವಾ ಸ್ತ್ರೀಸ್ವರೂಪಳೇ ? ಅಥವಾ ಎರಡೂ ರೂಪದಲ್ಲಿ ಇರುವ ವಸ್ತುವೇ ? ಇದು ಕೆಲವರ ಮನಸ್ಸಿನಲ್ಲಿ ಏಳುವ ಗೊಂದಲ. ಮೊದಲನೆಯದಾಗಿ ದೇವರು ಸರ್ವವ್ಯಾಪಿ, ಸರ್ವಶಕ್ತ, ಸರ್ವಜ್ಞ ಎಂದು ತಿಳಿಯುತ್ತೇವೆ. ಆದುದರಿಂದ ದೇವರು ಪುರುಷನೂ ಅಹುದು. ಸ್ತ್ರೀಯೂ ಅಹುದು. ಆಯಾಯಾ ಕಾಲದಲ್ಲಿ ಅದರ ಅಗತ್ಯಗಳಿಗನುಗುಣವಾಗಿ ಪುರುಷ ರೂಪನಾಗಿಯೂ, ಸ್ತ್ರೀರೂಪನಾಗಿಯೂ ಪ್ರಕಾಶಿಸಿ ಧರ್ಮಸಂಸ್ಥಾಪನೆ ಮಾಡುತ್ತಾನೆ. ಪುರುಷರೂಪದಲ್ಲಿ ವ್ಯಕ್ತವಾದಾಗ ಪುರುಷನಾಮದಿಂದಲೂ, ಸ್ತ್ರೀರೂಪದಲ್ಲಿ ವ್ಯಕ್ತವಾದಾಗ ಸ್ತ್ರೀನಾಮದಿಂದಲೂ ಭಜಿಸುತ್ತೇವೆ. ಆದುದರಿಂದ ಯಾವ ನಾಮವಾದರೇನು ? ಮೂಲ ರೂಪ ಒಂದೇ ಎಂದು ಅರಿಯುವುದು ಜ್ಞಾನವಿಹಿತವಾದುದು. ದೇವರಿಗೆ ಲಿಂಗಭೇದಗಳಿಲ್ಲ. ಗುಣಭೇದಗಳಿಲ್ಲ, ಆಕಾರಭೇದಗಳಿಲ್ಲ, ಅವನು ಸರ್ವಾಂತರ್ಯಾಮಿ, ಸರ್ವಸ್ವರೂಪಿ, ಆದುದರಿಂದ ದೇವರ ಮಹಿಮೆಯನ್ನು ಅರಿಯಲು ನಮಗೆ ವಿಹಿತವಾದ ಮಾರ್ಗದಿಂದ ನಮಗೆ ಸುಲಭಗ್ರಾಹ್ಯವಾದ ಮಾರ್ಗದಿಂದ ಕಂಡುಕೊಳ್ಳುವುದು ಸುಲಭವಾದ ಮಾರ್ಗ, ಅದೇ ಹಿರಿಯರು ನಮಗೆ ಅನುಗ್ರಹಿಸಿದ ಮಾರ್ಗ.

ಸರ್ವಜ್ಞರಾಗಿದ್ದ ಆಚಾರ್ಯ ಶ್ರೀ ಶಂಕರಭಗವತ್ಪಾದರೇ ದೇವಿಯನ್ನು ತಮ್ಮ ಸಾಧನತ್ರಯಗಳಿಂದ ಸ್ತುತಿಸಿ ಶೃಂಗೇರಿಯಲ್ಲಿ ಶಾರದೆಯಾಗಿ ಪ್ರತಿಷ್ಠಿಸಿದರೆಂದರೆ ದೇವೀ ಸಂಪತ್ತು ಎಷ್ಟು ಹಿರಿದಾದುದು, ಮುಖ್ಯವಾದುದು, ಪ್ರಧಾನವಾದುದೆಂಬುದು ಅರ್ಥವಾಗುತ್ತದೆ.

ಸ್ತ್ರೀ ಎಂದರೆ ಸರ್ವಗುಣಸಂಪನ್ನಳು, ಅವಳು ಮಮತಾಮಯೀ, ಕರುಣೆಯುಳ್ಳವಳು, ದಯಾಮಯೀ, ನೋವಿನಲ್ಲಿರುವವರನ್ನು ಬೇಗ ಸಂತೃಪ್ತಿಪಡಿಸುವವಳು, ನೋವಿನಲ್ಲಿದ್ದಾಗ ಕರೆಯುವ ಶಬ್ದವೂ "ಅಮ್ಮಾ" ಎಂದೇ? ಆದುದರಿಂದಲೇ ಅವಳು ಕರುಣಾಮಯೀ. ಸ್ತ್ರೀರೂಪಿನಲ್ಲಿರುವ ಅವಳನ್ನು ಭಜಿಸಿದರೆ ಸುಲಭವಾಗಿ ನಮಗೆ ಬೇಕಾದುದು ದೊರೆಯುತ್ತದೆ. ನಮಗೆ ಅದು ಸುಲಭ ಆದುದರಿಂದಲೇ ದೇವೀಪೂಜೆ ಬಹು ಸುಲಭ. ಅವರವರು ಅವರವರ ಭಾವಕ್ಕೆ ತಕ್ಕಂತೆ, ಅವರವರ ಶಕ್ತಿಗೆ ತಕ್ಕಂತೆ ಪೂಜಿಸಬಹುದು. ಧನಿಕನಾದವನು ತನ್ನ ಐಶ್ವರ್ಯ ಬಲದಿಂದ ಪೂಜಿಸಬಹುದು. ಸಾಧಾರಣವಾದವನು ಅವನ ಯೋಗ್ಯತೆಗೆ ತಕ್ಕಂತೆ ದೊರೆತ ಪುಷ್ಪದಿಂದ ಪೂಜಿಸಬಹುದು. ದೇವಿಗೆ ಅವರು ಏತರಲ್ಲಿ ಹೇಗೆ ಪೂಜಿಸಿದರೆಂದು ಮುಖ್ಯವಲ್ಲ ಅವರ ಹೃದಯಾಂತರಾಳದಲ್ಲಿರುವ ಭಕ್ತಿ ಎಂತಹುದು ಎಂಬುದೇ ಮುಖ್ಯ.

ಮಾಯೆಯೂ ಅವಳೇ, ವಿದ್ಯೆಯೂ ಅವಳೇ, ಹೃದಯದಲ್ಲಿರುವ ಧೈರ್ಯ ಲಕ್ಷ್ಮಿಯೂ ಅವಳೇ, ಪೆಟ್ಟಿಗೆಯಲ್ಲಿರುವ ಧನಲಕ್ಷ್ಮೀಯೂ ಅವಳೇ, ಅರಿವಾಗಿ ತಲೆಯಲ್ಲಿ ತುಂಬಿರುವ ವಿದ್ಯಾವಿಶಾರದೆಯೂ ಅವಳೇ, ಕುಡಿಯುವ ಜಲವೂ ಅವಳೇ, ನಿಂತಿರುವ ನೆಲವೂ ಅವಳೇ. ಎಲ್ಲಿ ತಾಳ್ಮೆ, ಶಾಂತಿ, ನೆಮ್ಮದಿ, ತಪಸ್ಸು ಇರುವುದೋ

ಮಾಡಿಕೊಂಡವರು ಈ ಲೋಕದ ಈತಿಬಾಧೆಗಳಿಂದ ದೂರವಾಗಿ ಜನ್ಮದ ಸಾರ್ಥಕತೆಯನ್ನು ಪಡೆದುಕೊಳ್ಳುತ್ತಾರೆ.

## ಈಶ್ವರನ ಸರ್ವವ್ಯಾಪಿತ್ವ

ಪರಮೇಶ್ವರನು ಸರ್ವಶಕ್ತ, ಸರ್ವವ್ಯಾಪಿ, ಸರ್ವಗುಣಸಂಪನ್ನನೆಂದು ಒಪ್ಪುವುದಾದರೆ ಅವನು ಅಣು, ರೇಣು, ತೃಣ, ಕಾಷ್ಠಗಳಲ್ಲಿಯೂ ಇರುವುದಾಗಿ ಒಪ್ಪಿದಂತಾಗುತ್ತದೆ. ಅವನ ಸರ್ವವ್ಯಾಪಿತ್ವವನ್ನು ವಿವರಿಸಲು ನಮ್ಮ ಶಾಸ್ತ್ರಗ್ರಂಥಗಳು ನಮಗೆ ಆಧಾರ. ಪ್ರಹ್ಲಾದನಿಗಾಗಿ ಕಂಭದಲ್ಲಿ ಗೋಚರಿಸಿದನಲ್ಲವೇ ? ದ್ರೌಪತಿಗಾಗಿ ಅಗೋಚರನಾಗಿಯೇ ಅಕ್ಷಯ ವಸ್ತ್ರವಿತ್ತನಲ್ಲವೇ ? ಯಾರುಯಾರು ಯಾವಯಾವ ರೂಪಿನಿಂದ ಬೇಡುವರೋ ಅವರ ಆ ರೂಪಿನಿಂದಲೇ ದರ್ಶನವಿತ್ತ ಉದಾಹರಣೆಗಳೂ ಬಹಳ ದೊರೆಯುತ್ತವೆ ಅಲ್ಲವೇ ?

ಪರಮಾತ್ಮನನ್ನು ಸರ್ವವ್ಯಾಪಿ ಎಂದು ಒಪ್ಪುವುದಾದರೆ ದೇವಾಲಯಗಳು ಅಗತ್ಯವೇ ? ಎಲ್ಲೆಡೆ ಇರುವವನನ್ನು ಒಂದೆಡೆ ಬಂಧಿಸಿ ಇಡಲು ಸಾಧ್ಯವೇ ? ಹಾಗೆ ಬಂಧಿಸಿದರೆ ನಮ್ಮ ಬಂಧನಕ್ಕೆ ದೇವರು ಒಳಪಡುವನೇ ? ಹಾಗೇನಾದರೂ ಒಳಪಡುವವನಾದರೆ ಅವನು ಸರ್ವಶಕ್ತನಾಗಲು ಸಾಧ್ಯವೇ ಇಲ್ಲ ಅಲ್ಲವೇ ? ಒಂದು ಮಾತ್ರ ಎಲ್ಲರೂ ಒಪ್ಪುವ ಸತ್ಯ. ಅದೇ ಅವನು ಸರ್ವವ್ಯಾಪಿ ಎನ್ನುವುದು. ಸರ್ವವ್ಯಾಪಿಯಾದವನು ದೇವಾಲಯದಲ್ಲಿಯೂ ಇರುವನಲ್ಲವೇ ? ಹಾಗೆಂದರೆ ದೇವಾಲಯದಲ್ಲಿ ಇರುತ್ತಾನೆ ಎಂದೇ ಅರ್ಥ.

## ದೇವಾಲಯಗಳು ಅಗತ್ಯವೇ ?

ಸರ್ವವ್ಯಾಪಿಗೆ ಒಂದು ನಿಗದಿತ ನೆಲೆ ಇರಲು ಸಾಧ್ಯವೇ ? ಸಾಧ್ಯ. ಏಕೆಂದರೆ ದೇವರು ಎನ್ನುವುದು ನಮ್ಮ ಭಾವನೆ ಮಾತ್ರ. ಅದೊಂದು ಅನುಭವ. ಆ ಅನುಭವ ಪಡೆದವನು ಸಚ್ಚಿದಾನಂದಬ್ರಹ್ಮನಲ್ಲಿ ಲೀನವಾಗುತ್ತಾನೆ. ಅದನ್ನೇ ಬ್ರಹ್ಮತ್ವವೆನ್ನುತ್ತೇವೆ. ಅದನ್ನು ಕಾಣುವ ಕೊನೆಯ ಹಂತವನ್ನು ಸಮಾಧಿ ಎನ್ನುತ್ತೇವೆ. ಅಂತಹ ಹಂತವನ್ನು ಒಂದೇ ಸಾರಿ ಹತ್ತಲು ಸಾಧ್ಯವೇ? ಉದಾಹರಣೆಗೆ ಬೆಟ್ಟದ ಮೇಲೆ ಒಂದು ದೇವಾಲಯವಿದೆ. ನಾವು ನೇರವಾಗಿ ನೆಗೆದು ದೇವಾಲಯದ ಮಹಾದ್ವಾರ ತಲುಪಲು ಸಾಧ್ಯವೇ ? ಒಂದೊಂದು ಹಂತವಾಗಿ ಹತ್ತುತ್ತಾ ಮುಂದುವರಿದರೆ ಖಂಡಿತವಾಗಿ ಮಹಾದ್ವಾರ ತಲುಪುತ್ತೇವೆ. ಅನಂತರ ದೇವರ ದರ್ಶನವನ್ನೂ ಮಾಡುತ್ತೇವೆ. ಅದರಂತೆ ಸಮಾಧಿಸ್ಥಿತಿಯನ್ನು ಪಡೆಯಬೇಕಾದರೆ

ಮೊದಲು ಪರಮಾತ್ಮನ ಇರುವಿಕೆಯನ್ನು ಅರಿಯಬೇಕು.

ಪರಮಾತ್ಮನು ಎಲ್ಲೆಲ್ಲೂ ಇರುವನೆಂದು ಒಪ್ಪುತ್ತೇವೆ, ನಂಬುತ್ತೇವೆ, ಹಾಗೆಂದಾಕ್ಷಣ ಎಲ್ಲೆಡೆಯಲ್ಲಿಯೂ ಅವನ ರೂಪವನ್ನು ನೋಡಲು ಸಾಧ್ಯವೇ ? ಎಲ್ಲೆಡೆಯೂ ಅಂತಹ ಒಂದು ಭಾವನೆಯನ್ನು ರೂಪಿಸಿ ಕೊಳ್ಳಲು ಸಾಧ್ಯವೇ ? ಅದಕ್ಕಾಗಿಯೇ ನಮ್ಮ ಹಿರಿಯರು ಒಂದು ಗುರುತನ್ನು ಮಾಡಿದರು ಆ ಗುರುತೇ ದೇವಾಲಯ. ಅಂದೊಂದು ಪವಿತ್ರ ಸ್ಥಳ. ಅಲ್ಲಿಗೆ ಬಂದಾಗ ನಮ್ಮ ದಿನ ನಿತ್ಯದ ಗೊಂದಲದಿಂದ ಹೊರಬಂದು ನಮ್ಮ ಹಲವಾರು ಸಮಸ್ಯೆಗಳನ್ನು ಮರೆತು ಸಚ್ಚಿದಾನಂದಸ್ವರೂಪವನ್ನೇ ನೆನೆಯುತ್ತೇವೆ. ಅಂತಹ ಭಾವನೆ ಎಲ್ಲಿ ಅಂದರೆ ಅಲ್ಲಿ ಬರುವುದು ಸಾಧಾರಣ ಜನರಿಗೆ ಸಾಧ್ಯವಿಲ್ಲ ಅದಕ್ಕಾಗಿಯೇ ಒಂದು ಸ್ಥಳ, ಅದೇ ದೇವಾಲಯ. ಆದುದರಿಂದಲೇ ದೇವಾಲಯದಲ್ಲಿ ಸುಲಭವಾಗಿ ನಮಗೆ ಆ ಅನುಭವ ದೊರೆಯುತ್ತದೆ. ಆ ಅನುಭವ ಪಡೆಯಬೇಕಾದರೆ ಆ ದೇವಾಲಯ ಬೇಕೇ ಬೇಕು.

ಈ ದೇವಾಲಯಗಳು ಬಹು ಪುರಾತನವಾದವುಗಳು. ಅವುಗಳಿಗೆ ಹಿರಿಯರಾದ ಋಷಿಗಳು, ತಪಸ್ವಿಗಳು, ಸಾಧು, ಸಂತರುಗಳು, ಮಹಾಭಕ್ತರುಗಳು ಬಂದು ಅಲ್ಲಿ ದೇವತೆಯ ದರ್ಶನ ಪಡೆದು ಪುನೀತರಾಗಿದ್ದಾರೆ. ಅವರ ಆಗಮನದಿಂದ ಆ ಕ್ಷೇತ್ರ ಪವಿತ್ರವಾಗಿದೆ. ಆ ಪವಿತ್ರಕ್ಷೇತ್ರದಿಂದ ಅಂತಹ ಹಿರಿಯರು ಪಾವನರಾಗಿದ್ದಾರೆ. ಆದುದರಿಂದಲೇ ದೇವಾಲಯಗಳೆಂದರೆ ಪುಣ್ಯಕ್ಷೇತ್ರಗಳು. ಅಂತಹ ಪುಣ್ಯ ಕ್ಷೇತ್ರಗಳಿಗೆ ನಾವೂ ಹೋಗುವುದರಿಂದ ನಮಗೆ ಎರಡು ರೀತಿಯಿಂದ ಫಲ ದೊರೆಯುತ್ತದೆ. ಮೊದಲನೆಯದು ನಮ್ಮ ಮನಸ್ಸಿಗೆ ಶಾಂತಿ ದೊರೆತು ಮನಸ್ಸು ಶುದ್ಧವಾಗುತ್ತದೆ. ಎರಡನೆಯದು ನಮ್ಮ ಹಿರಿಯರು ಪರಿಪಾಲಿಸಿದ ಮಾರ್ಗದ ಅರಿವಿನಿಂದಾಗಿ ನಮಗೆ ಸಿದ್ಧಿ ದೊರೆಯುತ್ತದೆ. ಆದುದರಿಂದಲೇ ದೇವಾಲಯಗಳು ಅತ್ಯಗತ್ಯ.

## ಮೂರ್ತಿಯಲ್ಲಿ ದೇವರಿದ್ದಾನೆಯೇ ?

ಕೆಲವರು ಕೆಲವು ಪ್ರಶ್ನೆಗಳನ್ನು ಮುಂದಿರಿಸುತ್ತಾರೆ. ದೇವರು ಸರ್ವಶಕ್ತನೆನ್ನು ವುದಾದರೆ ಕಲ್ಲು, ಮರ, ಅಥವ ಕಾಗದದಲ್ಲಿ ನೆಲಸುವನೇ? ಆ ಕಲ್ಲನ್ನು ಒಡೆದರೆ, ಮರವನ್ನು ಬೇಯಿಸಿದರೆ, ಕಾಗದವನ್ನು ಹರಿದು ಚೂರು ಮಾಡಿದರೆ ದೇವರು ನೇರವಾಗಿ ಬಂದು ಅವರನ್ನು ದಂಡಿಸಲಾರದವನಾಗಿದ್ದಾನೆ, ಏಕೆ? ಅವನು ಹೇಡಿ ಇರಬಹುದೇ ? ಹೇಡಿಯನ್ನು ನಾವು ಸರ್ವಶಕ್ತನೆನ್ನಲುಸಾಧ್ಯವೇ ?

ನಾವು ಉಪಯೋಗಿಸುವ ರೂಪಗಳೆಲ್ಲವೂ ನಮ್ಮ ಭಾವನೆಯ ಪ್ರತೀಕಗಳು. ನಾರಾಯಣನೆಂದರೆ ನಾಲ್ಕು ಕೈಗಳು, ಗಣಪನೆಂದರೆ ಸೊಂಡಿಲು, ಈಶ್ವರನೆಂದರೆ ದುಂಡಾದ ಕಲ್ಲು, ದೇವಿ ಎಂದರೆ ಸುಂದರವಾದ ವಿಗ್ರಹ. ಇವು ನಮ್ಮ ಭಾವನೆಯ ಪ್ರತೀಕ ಮಾತ್ರ.

ಈ ಪ್ರತೀಕ ಅಥವ ಪ್ರತಿ ರೂಪಿನ ಮುಂದೆ ನಿಂತು ಕೇಳಿದರೆ ಅದು ದೇವರಿಗೆ

ಕೇಳುವುದೇ ? ಅರ್ಥವಾಗುವುದೇ ?

ಒಬ್ಬಳು ತಾಯಿ, ಅವಳಿಗೆ ಮೂರು ತಿಂಗಳ ಒಂದು ಮಗುವಿದೆ ಎಂದು ಕೊಳ್ಳಿ. ಇದು ನಾವು ದಿನನಿತ್ಯ ನೋಡುವ ದೃಶ್ಯ. ಆ ಮಗು ಒಂದು ರೀತಿಯಾಗಿ ಅಳುತ್ತದೆ. ಆಗ ತಾಯಿಯಾದವಳಿಗೆ ಮಗುವಿಗೆ ಹೊಟ್ಟೆ ಹಸಿಯುತ್ತಿದೆ, ಈಗ ಹಾಲು ಬೇಕು ಎಂದು ಅದರ ಅಗತ್ಯವನ್ನು ಪೂರೈಸುತ್ತಾಳೆ. ಅದು 'ಅಮ್ಮ' ಎಂದು ಹೇಳುವ ಭಾವ ತಾಯಿಗೆ ಹೇಗೆ ಅರ್ಥವಾಯಿತು ? ಇದು ಸಾಧ್ಯವೇ ಎಂದರೆ, ಸಾಧ್ಯ, ನೂರಕ್ಕೆ ನೂರು ಸಾಧ್ಯ ಏಕೆಂದರೆ ಇದನ್ನು ದಿನವೂ ನೋಡುತ್ತಿದ್ದೇವೆ. ಅದೇ ಮಗು ಮತ್ತೊಂದು ಧ್ವನಿಯಿಂದ 'ಅಮ್ಮ' ಎಂದು ನರಳುತ್ತದೆ ಆಗ ತಾಯಿ ಹಾಲು ಕುಡಿಸುವುದಿಲ್ಲ ಅದಕ್ಕೆ ಬದಲಾಗಿ ಅದಕ್ಕೆ ಔಷಧೋಪಚಾರ ಮಾಡುತ್ತಾಳೆ. ಅದೇ ಮಗು ಮತ್ತೆ ಒಂದು ಸಮಯದಲ್ಲಿ ' ಅಮ್ಮ' ಎಂದರೆ ಅದರ ಕಲಕಲನೆ ನಗುವ ಮುಖವನ್ನು ನೋಡಿ ಮುದ್ದಿಸುತ್ತಾಳೆ. ಒಂದೇ ಶಬ್ದಕ್ಕೆ ಮಾಡುವ ಕ್ರಿಯೆಗಳೆಲ್ಲವೂ ಬೇರೆ ಬೇರೆ ? ಹೌದಲ್ಲವೇ ? ಆದರೆ ಪ್ರತಿ ಸಾರಿ 'ಅಮ್ಮ' ಎಂದಾಗಲೂ ಮಗುವಿನ ಭಾವನೆ ಬೇರೆಯಾಗಿದೆ. ಆ ಭಾವನೆಗೆ ತಕ್ಕಂತೆ ತಾಯಿ ಸ್ಪಂದಿಸುತ್ತಾಳೆ. ಇದು ತಾಯಿ ಮಗುವಿಗಿರುವ ಸಂಬಂಧ. ಅಂತೆಯೇ ಭಕ್ತನಿಗೂ ದೇವಿಗೂ ಇರುವ ಸಂಬಂಧ ನಾವು ಯಾವ ಭಾವದಿಂದ ಅರ್ಚಿಸುವೆವೋ ಅದೇ ಭಾವದಿಂದ ನಮಗೆ ಫಲ ದೊರೆಯುತ್ತದೆ. ಅಂತಹ ಭಾವ ಬರಬೇಕಾದರೆ ಪೂಜೆ ಒಂದು ಸಾಧನ. ಅಂತಹ ಭಾವ ನಮಗೆ ಬರಬೇಕಾದರೆ ಒಂದು ಮೂರ್ತಿ ಅಗತ್ಯವಲ್ಲವೇ ? ಅದು ಕಲ್ಲಾದರೇನು ? ಮರವಾದರೇನು ? ಕಾಗದವಾದರೇನು ?

ಸಾಧಾರಣವಾಗಿ ಇಹ ಜೀವನದ ಗೊಂದಲದಲ್ಲಿರುವ ಮನುಷ್ಯರಾದ ನಮಗೆ ಸಂಶಯಗಳು ಬಹಳ ಜಾಸ್ತಿ ಬರುತ್ತವೆ. ಅಂತಹ ಸಂಶಯಗಳಿಗೆ ಪರಿಹಾರ ಬೇಕಾದರೆ ನಾವು ಶಾಸ್ತ್ರಗಳನ್ನೇ ಆಶ್ರಯಿಸಬೇಕು. ಸಂದೇಹ ಬಂದಾಗ ಹಿರಿಯರನ್ನೂ, ಗುರುಗಳನ್ನೂ ಬೇಡಿ ಸರಿಯಾದ ಅರ್ಥ ಪಡೆದುಕೊಂಡು ನಮ್ಮ ಸಂದೇಹವನ್ನು ನಿವೃತ್ತಿ ಪಡಿಸಿಕೊಳ್ಳಬೇಕು. ಕೆಲವರ ಪ್ರಶ್ನೆ ಹೀಗಿದೆ. ಕೆಲವೇ ದೇವಾಲಯಗಳಲ್ಲಿ ಹೋಗಿ ಪ್ರಾರ್ಥಿಸಿದರೆ ನಾವು ಬೇಡಿದುದೆಲ್ಲವೂ ದೊರೆಯುತ್ತದೆ. ಮತ್ತೆ ಕೆಲವು ದೇವಾಲಯಗಳಲ್ಲಿ ಅದು ದೊರೆಯುವುದಿಲ್ಲ ಏಕೆ ? ಎಂದು.

ದೇವರು ನಾವು ಬೇಡಿದುದನ್ನು ನೀಡುತ್ತಾನೆ ನಿಜ. ಆದರೆ ಯಾವುದನ್ನು ಯಾವಾಗ, ಯಾವ ರೂಪದಲ್ಲಿ ನೀಡಬೇಕೆಂಬುದು ಗೊತ್ತು. ತಾಯಿಯನ್ನು ಮಗುವು ಬಹುವಾಗಿ ತನಗೆ ತಿಂಡಿ ಬೇಕೆಂದು ಪೀಡಿಸುತ್ತದೆ. ಅಳುತ್ತದೆ. ಆದರೆ ತಾಯಿ ಅದರ ಆರೋಗ್ಯದ ಕಾರಣದಿಂದ ಬೇಡಿದುದನ್ನೆಲ್ಲಾ ನೀಡುವುದಿಲ್ಲ. ಅದರ ಅಗತ್ಯಕ್ಕೆ ತಕ್ಕಂತೆ ನೀಡುತ್ತಾಳೆ. ಮಗುವು ಯಾವಾಗಲೋ ಪೀಡಿಸುತ್ತಿರುತ್ತದೆ ಆದರೆ ಈಗ ಅದು ಮರೆತು ಆಟವಾಡುತ್ತಿರುತ್ತದೆ. ಈಗ ಅದಕ್ಕೆ ತಿಂಡಿ ಕೊಡುವ ಸಮಯ ಬಂದಿದೆ, ಆಗ ಆ ತಾಯಿ ಆ ಮಗುವನ್ನು ಕೂಗಿ ಕರೆದು ಅದಕ್ಕೆ ಅದು ಬೇಡಿದ

ತಿಂಡಿಯನ್ನು ನೀಡುತ್ತಾಳೆ. ಅದರಂತೆ ದೇವರೂ ಸಹ ನಾವು ಬೇಡಿದ ಪ್ರಾರ್ಥನೆಯನ್ನು ನೆರವೇರಿಸುತ್ತಾನೆ, ಅವನು ಕರುಣಾಮಯಿ. ಆದರೆ ಅದಕ್ಕೆ ಸರಿಯಾದ ಕಾಲಬರಬೇಕು, ಅದಕ್ಕಾಗಿ ನಾವು ಕಾಯಲೇಬೇಕು. ನಮ್ಮ ಬೇಡಿಕೆಯನ್ನು ಅರ್ಪಿಸಲೇಬೇಕು. ಅದಕ್ಕಾಗಿಯೇ ಪ್ರಾರ್ಥನೆ , ಪೂಜೆ, ಇತ್ಯಾದಿಗಳು.

ದೇವರನ್ನು ಒಂದೇ ಒಂದು ಸಾರಿ ಭಕ್ತಿಯಿಂದ ಕರೆದರೂ ಸಾಕು, ಓಡಿ ಬರುತ್ತಾನೆ ಮತ್ತೆ ಮತ್ತೆ ಕರೆಯಬೇಕಾಗಿಲ್ಲ, ಆದರೆ ನಮ್ಮಲ್ಲಿ ಅಂತಹ ಭಕ್ತಿ ಬಂದಿದ್ದರೆ ಒಂದೇ ಒಂದು ಸಾರಿಸಾಕು. ಅಂತಹ ಭಕ್ತಿ ಬರದಿದ್ದರೆ ಬರುವವರೆವಿಗೂ ಬೇಡುತ್ತಲೇ ಇರಬೇಕು. ಅದಕ್ಕಾಗಿಯೇ ಪೂಜೆ, ಪೂಜೆಯ ಮೊದಲು ಸಂಕಲ್ಪ ಅದೊಂದು ವಿಧಿ.

ಶುದ್ಧ ತಿಳಿವಳಿಕೆಯುಳ್ಳವರು ದೇವರನ್ನು ಏನನ್ನೂ ಬೇಡುವುದಿಲ್ಲ. ಸಾಧಾರಣರಾದ ನಮ್ಮಂತಹವರಿಗೆ ಬೇಡುವುದು ಹಲವಾರು ನೂರುಗಳು, ನನ್ನ ಮಗಳಿಗೆ ಮದುವೆಯಾಗಲಿಲ್ಲ, ನನ್ನ ಮಗನಿಗೆ ಕೆಲಸ ದೊರೆಯಲಿಲ್ಲ, ನಾವು ನಿಲ್ಲಲು ನಮ್ಮದೇ ಆದ ಒಂದು ಸೂರು ಇಲ್ಲ. ನನ್ನ ಅಪ್ಪ, ಅಮ್ಮ, ಹೆಂಡತಿ ಅಥವಾ ಮಗನು ಅನಾರೋಗ್ಯದಿಂದ ಪೀಡಿತರಾಗಿದ್ದಾರೆ ಇತ್ಯಾದಿ ಇತ್ಯಾದಿ. ಇದಕ್ಕೆ ಪರಿಹಾರ ಪಡೆಯಲು ನಾವು ದೇವರನ್ನು ಮೊರೆ ಹೋಗುತ್ತೇವೆ. ಆಗ ದೇವರು ಯಾವುದೋ ಒಂದು ರೂಪಿನಲ್ಲಿ ಒಂದು ಸಹಾಯ ಮಾಡುತ್ತಾನೆ. ಅದು ನಮಗೆ ಬುದ್ಧಿಗಮ್ಯವಾದುದು. ಬುದ್ಧಿಯು ಗ್ರಹಿಸುತ್ತದೆ. ಅದುದರಿಂದಲೇ ಒಂದು ಪರಿಹಾರವಾದ ನಂತರ ಮತ್ತೊಂದನ್ನು ಮುಂದಿರಿಸುತ್ತೇವೆ. ಆದುದರಿಂದ ದೇವರು ನಮ್ಮ ಹೃದಯಲ್ಲಿಯೇ ಗೋಚರಿಸುತ್ತಾನೆ. ಹಾಗೆ ಗೋಚರಿಸುವುದಕ್ಕೆ ಸುಲಭ ಸಾಧನವೇ ವಿಗ್ರಹಗಳು. ವಿಗ್ರಹಗಳು ದೇವರ ಪ್ರತೀಕಗಳು. ನಾವು ವಿಗ್ರಹದಲ್ಲಿ ಪೂರ್ಣವಾಗಿ ದೇವರ ಅನುಭವ ಪಡೆಯುತ್ತೇವೆ. ದೇವರ ದರ್ಶನವನ್ನು ಪಡೆಯುತ್ತೇವೆ. ಇದು ಅನುಭವ ಸತ್ಯವಲ್ಲವೇ ! ಯಾರು ಏನನ್ನು ಹೇಳಿದರೂ ನಾವು ಅದಕ್ಕೆ ವಿರುದ್ಧವಾದುದನ್ನು ಒಪ್ಪುವುದಿಲ್ಲ. ಆದರೆ ಅದರಲ್ಲಿ ನಂಬಿಕೆ ಇಲ್ಲದವನಿಗೆ ಅದೊಂದು ನಿರ್ಜೀವ ವಸ್ತು ಮಾತ್ರ, ಅವನ ಬುದ್ಧಿಗೆ ಆ ಭಾವನೆ ಬರುವುದಿಲ್ಲ. ಅವನು ಬುದ್ಧಿಗಮ್ಯವಲ್ಲ ಆದುದರಿಂದಲೇ ಅದನ್ನು ಒಡೆದರೋ, ಬೇಯಿಸಿದರೋ, ಅಥವ ಚೂರುಮಾಡಿದರೋ ಅವನಿಗೆ ಯಾವ ಭಾವವೂ ದೊರೆಯುವುದಿಲ್ಲ. ಬುದ್ಧಿಗಮ್ಯವಾದವನಿಗೆ ಮಾತ್ರ ಅಂತಹ ರೂಪುಗಳು ಅಗತ್ಯ.

ಭಾವಗಮ್ಯರಲ್ಲದವರು ಹೀಗೆ ಒಂದು ಸಣ್ಣ ಚಿಂತನೆ ಮಾಡಲಿ. ಉದಾಹರಣೆಗೆ ನಮ್ಮ ಬಂಧುಗಳು ದೆಹಲಿಯಲ್ಲಿದ್ದಾರೆ ಎಂದುಕೊಳ್ಳೋಣ ಕೇವಲ 25 ಪೈಸೆ ಕಾಗದದಲ್ಲಿ ಅವರ ವಿಳಾಸ ಸರಿಯಾಗಿ ಬರೆದು ಒಂದು ಅಂಚೆ ಪೆಟ್ಟಿಗೆಗೆ ಹಾಕಿದರೆ ಸಾಕು ಅದು ಅವರಿಗೆ ತಲುಪಿಬಿಡುತ್ತದೆ. ಕೇವಲ 25 ಪೈಸೆಗೆ ಇಲ್ಲಿಂದ ದೆಹಲಿಗೆ ನಿಮ್ಮ ಸುದ್ದಿ ತಲಪಲು ಸಾಧ್ಯವೇ ? 2500 ಕಿ.ಮೀಗಳು. ಸುಳ್ಳು ಸಾಧ್ಯವೇ ಇಲ್ಲ.

ಆದರೆ ನಿಜ, ಒಪ್ಪಲೇಬೇಕು. ಯಾವಾಗ ಅದು ಸುಳ್ಳಾಗುತ್ತದೆ ಅದಕ್ಕೊಂದು ವ್ಯವಸ್ಥೆ ಇಲ್ಲದಿದ್ದಾಗ. ಅಥವ ನೀವು ಬರೆದ ವಿಳಾಸ ಸರಿಯಾಗಿಲ್ಲವಾದಾಗ ಎರಡೂ ಸರಿಯಿದ್ದರೆ ನಾವು ಯಾರಿಗೆ ಬರೆದೆವೋ ಅವರಿಗೆ ತಲಪಲೇಬೇಕು. ತಲುಪುತ್ತದೆ. ತಲುಪುತ್ತದೆ ಎಂಬ ನಂಬಿಕೆ ನಮಗಿರುವುದರಿಂದಲೇ ಆ ಕಾಗದ ಬರೆದು ನಾವು ಅಂಚೆಯ ಡಬ್ಬಕ್ಕೆ ಹಾಕುತ್ತೇವೆ ಅಲ್ಲವೇ ? ನಮ್ಮ ನಂಬಿಕೆಗೆ ನಾವು ಬರೆವ ವಿಳಾಸ ಆಧಾರ, ಆ ವಿಳಾಸಕ್ಕೆ ಒಂದು ವ್ಯವಸ್ಥೆ ಆಧಾರ ಅಲ್ಲವೇ ? ಅದರಂತೆ ಪರಮಾತ್ಮನ ಸಾಕ್ಷಾತ್ಕಾರ ಪಡೆಯಲು ಒಂದು ಭಾವ ಅಗತ್ಯ. ಅದೇ ವಿಳಾಸ ಎಂದುಕೊಳ್ಳಿ ಒಂದು ವ್ಯವಸ್ಥೆ ಅಗತ್ಯವಲ್ಲವೇ ಅದೇ ವಿಗ್ರಹ ಇವೆರಡೂ ಇದ್ದರೆ ಕಾಗದ ದೆಹಲಿ ತಲಪಿದಂತೆ ನಮ್ಮ ಭಾವನೆ ದೇವರನ್ನು ತಲಪುವುದಲ್ಲವೇ ? ಅದಕ್ಕಾಗಿಯೇ ವಿಗ್ರಹಗಳು ಬೇಕು, ಬೇಕೇ ಬೇಕು. ಅದನ್ನು ನಂಬುವುದೂ, ಬಿಡುವುದು ಅವರವರ ಸ್ವಂತ ಕಲ್ಪನೆ. ಸ್ವಂತ ಭಾವನೆ.

## ಭಗವತ್ಪೂಜೆ ಅಗತ್ಯವೇ ?

ಪರಮಾತ್ಮನ ದರ್ಶನವನ್ನು ಸುಲಭವಾಗಿ ಪಡೆಯುವ ಸಾಧನ ಪೂಜೆ. ಪೂಜೆಯಿಂದ ಮನಸ್ಸು ಶುದ್ಧಿಯಾಗುತ್ತದೆ, ಭಾವಸಿದ್ಧಿ ಪಡೆಯುತ್ತದೆ. ಆದುದರಿಂದಲೇ ಪರಮಾತ್ಮ ಸ್ವರೂಪದ ದರ್ಶನ ಪಡೆಯಲು ಯಾವ ಯಾವ ಮಾರ್ಗ ಅನುಭವ ಪೂರ್ವಕವಾಗಿ ನಮ್ಮ ಋಷಿವರೇಣ್ಯರಿಂದ ಪ್ರಸೀದವಾಗಿದೆಯೋ ಅದನ್ನು ನಾವು ಇಂದು ಪೂಜಾವಿಧಾನವಾಗಿ ಅನುಸರಿಸುತ್ತೇವೆ. ಆದುದರಿಂದ ನಮ್ಮ ಇಂದಿನ ಪೂಜಾವಿಧಾನ ನಾವು ಇಂದು 'ನಮ್ಮ ಮನಸ್ಸಿಗೆ ತಕ್ಕಂತೆ ರೂಪಿಸಿಕೊಂಡುದಲ್ಲ. ನಮ್ಮ ಋಷಿವರೇಣ್ಯರು ಅನುಭವ ಪೂರ್ವಕವಾಗಿ ಕಂಡು ಕೊಂಡ ಮಾರ್ಗ. ಈ ಮಾರ್ಗದಿಂದ ಅಗಣಿತ ಸಂಖ್ಯೆಯಲ್ಲಿ ಭಕ್ತರು ತಮ್ಮ ದಾರಿ ಕಂಡು ಕೊಂಡಿರುತ್ತಾರೆ. ಸಹಸ್ರ ಸಹಸ್ರ ವರ್ಷಗಳಿಂದ ಪ್ರಾಯೋಗಿಕವಾಗಿ ಸಿದ್ಧ ಪಡಿಸಿದ ಪದ್ಧತಿ. ಋಷಿಪ್ರಣೀತವಾದ ಪದ್ಧತಿ, ಇಂತಹ ಪದ್ಧತಿಗಳನ್ನು ರೂಪುಗೊಳಿಸಿ, ಅದನ್ನು ಜೀವನಕ್ರಮದಲ್ಲಿ ಸರಿಯಾದ ರೀತಿಯಲ್ಲಿ ಅನುಷ್ಠಾನಯೋಗ್ಯ ವಾಗುವಂತೆ ಮಾಡಿ ದಾರಿ ತೋರಿದ್ದಾರೆ. ಅದರಂತೆ ಮುಂದುವರೆದರೆ ನಮ್ಮ ಜನ್ಮವೂ ಸಾರ್ಥಕತೆಯನ್ನು ಪಡೆಯುತ್ತದೆ.

ಶ್ರೀ ಶಂಕರಭಗವತ್ಪಾದರು ನಮಗಾಗಿ ಪೂಜಾಪದ್ಧತಿಯನ್ನು ರೂಪಿಸಿ ಕೊಟ್ಟಿದ್ದಾರೆ. ಸಾಧಾರಣವಾಗಿ ಅದನ್ನು ಸುಲಭಗ್ರಾಹ್ಯವಾಗುವಂತೆ ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಅವರವರು ಅವರವರಿಗೆ ತಕ್ಕುದಾದ, ವಿಭಾಗದ ಮುಖಾಂತರ ಹಂತ ಹಂತವಾಗಿ ಮುಕ್ತಿ ಸೋಪಾನದಲ್ಲಿ ಸಾಗಬಹುದು.

ಮೊದಲನೆಯದಾಗಿ ಸರ್ವಶಾಸ್ತ್ರ ಕೋವಿದರಾದವರಿಗೆ ಸಮಾಧಿಸ್ಥರಾಗಿ ಸತ್ಯದ ದರ್ಶನ ಪಡೆಯುವುದು. ಇದು ಕೆಲವರಿಗೆ ಮಾತ್ರ ಸಾಧ್ಯ. ಅಂತಹವರು ಮಹಾ ಋಷಿ ಪುಂಗವರ ಪಂಕ್ತಿಯಲ್ಲಿ ಸೇರುತ್ತಾರೆ.

ಮೂರನೆಯದಾಗಿ ಸಾಧಾರಣ ಜನರಿಗಾಗಿ ಪಂಚಾಯತನ ಪೂಜಾಪದ್ಧತಿ. ಈ ಪದ್ಧತಿಯಲ್ಲಿ ಸಾಧಾರಣ ಜನರು ಭಕ್ತಿಯ ಮುಖಾಂತರ ಸತ್ಯದ ದರ್ಶನ ಪಡೆಯಲು ಮಾರ್ಗ ತೋರಿದ್ದಾರೆ.

ಸತ್ಯದ ದರ್ಶನವನ್ನು ಸಾಧಾರಣರಾದವರೂ ಪಡೆಯಲು, ಸರ್ವರೂ ಮುಕ್ತಿಗೆ ಅರ್ಹರನ್ನಾಗಿಸಲು ಹಲವಾರು ಸ್ತೋತ್ರಮಾಲೆಗಳನ್ನು ರಚಿಸಿ ಭಕ್ತಿ ಲೋಕಕ್ಕೆ ಕರೆದೊಯ್ಯುತ್ತಾರೆ. ಅಂತಹ ಒಂದು ಸ್ತೋತ್ರ ದೇವಿ ಚತುಃಷಷ್ಟ್ಯುಪಚಾರ ಪೂಜಾ ಸ್ತೋತ್ರ.



ಅಧ್ಯಾಯ - ೩

# ದೇವೀ ಸ್ತುತಿ

ನಮೋಽಸ್ತುತೇ ಭಗವತಿ ಪಾಪನಾಶಿನಿ
ನಮೋಽಸ್ತುತೇ ಸುರರಿಪು ದರ್ಪಶಾತನಿ |
ನಮೋಽಸ್ತುತೇ ಹರಿಹರರಾಜ್ಯದಾಯಿನಿ
ನಮೋಽಸ್ತುತೇ ಮಖಭುಜಕಾರ್ಯಕಾರಿಣಿ || ||೧||

ಪಾಪನಾಶಿನಿಯಾದ ಬಗವತಿಗೆ ನಮಸ್ಕಾರಗಳು. ಸುರರ ಶತ್ರುಗಳಾದ ರಾಕ್ಷಸರನ್ನು ಸಂಹಾರ ಮಾಡಿದ ದೇವಿಗೆ ನಮಸ್ಕಾರಗಳು. ಹರಿಹರಾದಿಗಳಿಗೆ ಅವರ ರಾಜ್ಯಗಳನ್ನು ಪ್ರದಾನ ಮಾಡಿದ ದೇವಿಗೆ ನಮಸ್ಕಾರಗಳು. ಯಜ್ಞ ಜೀವಿಗಳಾದ ದೇವತೆಗಳಿಗೆ ಅದನ್ನು ಪಡೆಯುವಂತೆ ಮಾಡಿದ ದೇವಿಗೆ ನಮಸ್ಕಾರಗಳು.

ನಮೋಽಸ್ತುತೇ ತ್ರಿದಶರಿಪುಕ್ಷಯಂಕರಿ
ನಮೋಽಸ್ತುತೇ ಶತಮಖಪಾದಪೂಜಿತೇ |
ನಮೋಽಸ್ತುತೇ ಮಹಿಷವಿನಾಶಕಾರಿಣಿ
ನಮೋಽಸ್ತುತೇ ಹರಿಹಯಭಾಸ್ಕರಸ್ತುತೇ || ||೨||

ಮೂರು ದಿಸೆಗಳಲ್ಲಿರುವ ಶತ್ರುಗಳನ್ನು ಧ್ವಂಸಮಾಡುವ ದೇವಿಗೆ ನಮಸ್ಕಾರಗಳು, ಇಂದ್ರನಿಂದ ಪಾದಪೂಜೆ ಹೊಂದುವ ದೇವಿಗೆ ನಮಸ್ಕಾರಗಳು, ಮಹಿಷಾಸುರನನ್ನು ನಾಶಮಾಡಿದ ದೇವಿಗೆ ನಮಸ್ಕಾರಗಳು, ಹರಿ,ಇಂದ್ರ ಮತ್ತು ಸೂರ್ಯರಿಂದಲೂ ಸ್ತುತಿಸಲ್ಪಡುವ ದೇವಿಗೆ ನಮಸ್ಕಾರಗಳು.

ನಮೋಽಸ್ತು ತೇಽಷ್ಟಾದಶ ಬಾಹುಶಾಲಿನಿ
ನಮೋಽಸ್ತುತೇ ಶುಂಭ ನಿಶುಂಭಘಾತಿನಿ |
ನಮೋಽಸ್ತುತೇ ಚಾರ್ತಿಹರೆ ತ್ರಿಶೂಲಿನಿ
ನಮೋಽಸ್ತು ನಾರಾಯಣಿ ಚಕ್ರಧಾರಿಣಿ || ||೩||

ಹದಿನೆಂಟು ಭುಜಗಳಿಂದ ಶೋಭಿಸುವ ದೇವಿಗೆ ನಮಸ್ಕಾರಗಳು. ಶುಂಭ, ನಿಶುಂಭರನ್ನು ಹತಗೊಳಿಸಿದ ದೇವಿಗೆ ನಮಸ್ಕಾರಗಳು. ತ್ರಿಶೂಲಧಾರಿಣಿಯಾದ ದೇವಿಗೆ ನಮಸ್ಕಾರಗಳು. ನಾರಾಯಣಿಯಾಗಿ ಚಕ್ರಧರಿಸಿರುವ ದೇವಿಗೆ ನಮಸ್ಕಾರಗಳು.

ನಮೋಽಸ್ತು ವಾರಾಹಿ ಸದಾಧರಾಧರೇ
ತ್ವಾಂ ನಾರಸಿಂಹಿ ಪ್ರಣತಾ ನಮೋಽಸ್ತುತೇ |
ನಮೋಽಸ್ತುತೇ ವಜ್ರಧರೇ ಗಜಧ್ವಜೇ
ನಮೋಽಸ್ತು ಕೌಮಾರಿ ಮಯೂರವಾಹಿನಿ || ||೪||

ಭೂಧಾರಿಣಿಯಾದ ವಾರಾಹಿಗೆ ನಮಸ್ಕಾರಗಳು. ನಾರಸಿಂಹಿಣಿಯ ರೂಪಧರಿಸಿರುವ ದೇವಿಗೆ ನಮಸ್ಕಾರಗಳು, ವಜ್ರಾಯುಧವನ್ನು ಧರಿಸಿರುವ ಗಜವಾಹಿನಿಯಾದ ದೇವಿಗೆ ನಮಸ್ಕಾರಗಳು. ತೇಜಸ್ವಿರೂಪಿಯಾದ ಮಯೂರ ವಾಹಿನಿಯಾದ ಕೌಮಾರಿಗೆ ನಮಸ್ಕಾರಗಳು.

ನಮೋಽಸ್ತು ಪೈತಾಮಹ ಹಂಸವಾಹನೇ
ನಮೋಽಸ್ತು ಮಾಲಾವಿಕಟೇ ಸುಕೇಶಿನಿ |
ನಮೋಽಸ್ತುತೇ ರಾಸಭಪೃಷ್ಠವಾಹಿನಿ
ನಮೋಽಸ್ತು ಸರ್ವಾರ್ತಿಹರೇ ಜಗನ್ಮಯಿ || ||೫||

ಚತುರ್ಮುಖಿ ಹಂಸವಾಹಿನಿಯಾದ ದೇವಿಗೆ ನಮಸ್ಕಾರಗಳು, ನಿಬಿಡವಾದ ಮಾಲೆಯನ್ನು ಧರಿಸಿರುವ ಸುಕೇಶಿನಿಯಾದ ದೇವಿಗೆ ನಮಸ್ಕಾರಗಳು. ರಾಸಭಪೃಷ್ಠವಾಹಿನಿಯಾದ ದೇವಿಗೆ ನಮಸ್ಕಾರಗಳು, ಸರ್ವಪೀಡಾನಾಶಕಳಾದ ಜಗನ್ಮಯಮೂರ್ತಿಗೆ ನಮಸ್ಕಾರಗಳು.

ನಮೋಽಸ್ತು ವಿಶ್ವೇಶ್ವರಿ ಪಾಹಿ ವಿಶ್ವಂ
ನಿಷೂದಯಾರಿಂ ದ್ವಿಜದೇವತಾನಾಮ್ |
ನಮೋಽಸ್ತುತೇ ಸರ್ವಮಯಿ ತ್ರಿನೇತ್ರೇ
ನಮೋ ನಮಸ್ತೇ ವರದೇ ಪ್ರಸೀದ || ||೬||

ವಿಶ್ವವನ್ನು ರಕ್ಷಿಸುವ ವಿಶ್ವೇಶ್ವರಿಯಾದ ನಿನಗೆ ನಮಸ್ಕಾರಗಳು. ದೇವ ಬ್ರಾಹ್ಮಣ ಶತ್ರುಗಳನ್ನು ನಾಶಪಡಿಸುವ ದೇವಿಗೆ ನಮಸ್ಕಾರಗಳು. ಸ್ವ ಸರ್ವರೂಪಿಣಿಯಾದ, ತ್ರಿನೇತ್ರಳಾದ ದೇವಿಗೆ ನಮಸ್ಕಾರಗಳು. ವರಪ್ರದಳಾದ ದೇವಿಗೆ ನಮಸ್ಕಾರಗಳು.

ಬ್ರಹ್ಮಾಣೀ ತ್ವಂ ಮೃಡಾನೀ ವರಶಿಖಿಗಮನಾ ಶಕ್ತಿಹಸ್ತಾ ಕುಮಾರೀ |
ವಾರಾಹೀ ತ್ವಂ ಸುವಕ್ತ್ರಾ ಖಗಪತಿಗಮನಾ ವೈಷ್ಣವೀ ತ್ವಂ ಸಶಾರ್ಙ್ಗೀ,
ದುರ್ದರ್ಶಾ ನಾರಸಿಂಹೀ ಘುರು ಘುರಿತರವಾ ತ್ವಂ ತಥೈಂದ್ರೀ ಸವಜ್ರಾ |
ತ್ವಂ ಮಾರೀ ಚರ್ಮಮುಂಡಾ ಶವಗಮನರತಾ ಯೋಗಿನೀ ಯೋಗಸಿದ್ಧಾ || ||೭||

ಹೇ ದೇವಿಯೇ, ನೀನೇ ಬ್ರಹ್ಮಾಣಿಯಾಗಿಯೂ, ಮೃಡಾನಿಯಾಗಿಯೂ, ಮಯೂರವಾಹನೆಯಾಗಿಯೂ, ಶಕ್ತ್ಯಾಯುಧಧಾರಿಣಿಯಾದ ಕೌಮಾರಿ ಯಾಗಿಯೂ, ವಾರಾಹಿಯಾಗಿಯೂ, ಗರುಡವಾಹನೆಯಾದ ಶಾರ್ಙ್ಗಧಾರಿಣಿಯಾದ

ವೈಷ್ಣವಿಯಾಗಿಯೂ, ಮುಖ ವಿಕಾರ ಹೊಂದಿ ಘುರು ಘುರು ಎಂದು ಶಬ್ದ ಮಾಡುತ್ತಿರುವ ನಾರಸಿಂಹಿಣಿಯಾಗಿಯೂ, ವಜ್ರಾಯುಧಧಾರಿಣಿಯಾದ ಇಂದ್ರಾಣಿಯಾಗಿಯೂ, ಚಂಡಮಾರಿಯಾಗಿಯೂ, ಶಿವನಲ್ಲಿ ಬಹು ಪ್ರೀತಿಯಿಂದ ಕೂಡಿರುವ ಚರ್ಮಮುಂಡಾರೂಪಳಾಗಿಯೂ, ಯೋಗ ಸಿದ್ಧಿ ಪಡೆದಿರುವ ಯೋಗಿನಿಯಾಗಿಯೂ, ಹಲವಾರು ರೂಪಗಳಿಂದ ಗೋಚರಿಸುತ್ತಿರುವೆ.

ಓಂ ನಮಸ್ತೇ ತ್ರಿನೇತ್ರೇ ಭಗವತಿ ತವ ಚರಣಾನುಚ್ಛ್ರಿತಾಯೇ
ಅಹರಹರ್ವಿನತಶಿರೋಧರಾಂಸನಮ್ರಾಃ |
ನ ಹಿ ನ ಹಿ ಪರಮಸ್ತ್ಯಶುಭಂ ಸತತಂ ಸ್ತುತಿ
ಬಲಿಕುಸುಮಕರಾಃ ಸತತಂ ಯೇ || ||೮||

ಓಂ ತ್ರಿನೇತ್ರೆಯೇ ನಮಸ್ಕಾರಗಳು, ಯಾರು ನಿನಗೆ ದಿನವೂ ತಪ್ಪದೇ ಶಿರಬಾಗಿ ನಮಸ್ಕರಿಸುವರೋ, ನಿನ್ನನ್ನು ಸ್ತುತಿಸಿ ನಿನಗೆ ಪುಷ್ಪಗಳನ್ನು ಸಮರ್ಪಿಸುವರೋ, ಅವರಿಗೆ ಅಮಂಗಲವು ಇರುವುದಿಲ್ಲ.

ಓಂ, ಏವಂ ಸ್ತುತಾ ಸುರವರೈಃ ಸುರಶತ್ರುನಾಶೀ
ಪ್ರಾಹ ಪ್ರಹಸ್ಯ ಸುರಸಿದ್ಧಮಹರ್ಷಿವರ್ಯಾನ್ |
ಪ್ರಾಪ್ತೋ ಮಯಾದ್ಭುತತಮೋ ಭವತಾಂ ಪ್ರಾಸಾದಾತ್ಸಂಗ್ರಾಮ
ಮೂರ್ಧ್ನಿ ಸುರಶತ್ರುಜಯಃ ಪ್ರಮರ್ದಾತ್ || ೯||

ಓಂ, ಈ ರೀತಿಯಾಗಿ ದೇವತೆಗಳಿಂದ ಸ್ತುತಿಸಲ್ಪಟ್ಟ ದೇವಿಯು ನಗುತ್ತಾ, ದೇವತೆಗಳು, ಸಿದ್ಧರು, ಮಹರ್ಷಿಗಳು ಇವರ ಪರಾಕ್ರಮದಿಂದ ನನಗೆ ಅದ್ಭುತ ವಿಜಯ ಪ್ರಾಪ್ತವಾಯಿತು ಎಂದು ತಿಳಿಸಿ ಸಂತೋಷಿಸಿದಳು.

ಇಮಾಂ ಸ್ತುತಿಂ ಭಕ್ತಪರಾ ನರೋತ್ತಮಾ
ಭವದ್ಭಿರುಕ್ತಾ ಮಮ ಕೀರ್ತಯಂತಿ |
ದುಃಸ್ವಪ್ನನಾಶೋ ಭವಿತಾ ನ ಸಂಶಯೋ
ವರಸ್ತಥಾನ್ಯೋ ಪ್ರಿಯತಾಮಭೀಪ್ಸಿತಃ || ||೧೦||

ದೇವಿ, ಭಕ್ತರಾದ ಮಾನವರು ನಿನ್ನ ಸ್ತುತಿಯನ್ನು ಸರ್ವಕಾಲದಲ್ಲಿಯೂ ಮಾಡಿದಲ್ಲಿ ಅವರಿಗೆ ದುಃಸ್ವಪ್ನ ನಾಶವಾಗುವುದರಲ್ಲಿ ಸಂಶಯವಿಲ್ಲ. ನಿಮಗೆ ಇಷ್ಟವಾದ ವರವೊಂದನ್ನು ಕೇಳಿರಿ ಎಂದು ದೇವಿಯು ಪ್ರಸನ್ನಳಾಗಿ ದೇವತೆಗಳನ್ನು ಸಂತೋಷ ಪಡುವಂತೆ ಮಾಡಿದಳು.

ದೇವಾ ಊಚುಃ

ಯದಿ ವರದಾ ಭವತೀ ತ್ರಿದಶಾನಾಂ
ದ್ವಿಜಶಿಶುಗೋಷು ಯತ ಸತ್ವ ಹಿತಾಯ |

ಪುನರಪಿ ದೇವರಿಪೂನಪರಾಂಸ್ತ್ವಂ
ಪ್ರದಹ ಹುತಾಶನತುಲ್ಯಶರೀರೇ || ||೧೧||

ದೇವತೆಗಳು ಪ್ರಾರ್ಥಿಸಿದುದು

ದೇವಿಯೇ, ನೀನು ದೇವತೆಗಳ ವಿಷಯದಲ್ಲಿ ವರಪ್ರದಳಾಗಿರುವೆ. ಬ್ರಾಹ್ಮಣ ಶಿಶುಗಳ ಮತ್ತು ಗೋಸಂತತಿಯ ಹಿತಕ್ಕಾಗಿ ಪ್ರಯತ್ನಿಸು. ದೇವತೆಗಳ ಉಳಿದಿರುವ ಶತ್ರುಗಳನ್ನು ಸಂಹರಿಸುವವಳಾಗು.

ದೇವ್ಯುವಾಚ

ಭೂಯೋ ವಧಿಷ್ಯಾಮಿ ಸುರಾರಿಮುತ್ತಮಂ
ಸಂಭೂಯ ನಂದಸ್ಯ ಗೃಹೇ ಯಶೋದಯಾ |
ತತ್ರಾವತೀರ್ಣಾ ಲವಣಂ ತಥಾ ಪರೌ
ಶುಂಭಂ ನಿಶುಂಭಂ ದಶನಪ್ರಹಾರಿಣೀ || ||೧೨||

ದೇವಿಯು ಹೇಳಿದಳು

ಎಲೈ ದೇವತೆಗಳಿರಾ ಪುನಃ ನಾನು ನಂದಗೋಪನ ಮನೆಯಲ್ಲಿ ಜನಿಸಿ ಯಶೋದೆಯೊಡನೆ ಸೇರಿ ಪ್ರಮುಖರಾದ ದೇವತೆಗಳ ಶತ್ರುಗಳನ್ನೆಲ್ಲಾ ನಾಶ ಮಾಡುತ್ತೇನೆ. ಶುಂಭ, ನಿಶುಂಭ ಮೊದಲಾದ ರಾಕ್ಷಸರನ್ನೂ ದಶನಪ್ರಹಾರದಿಂದ ನಾಶ ಮಾಡುತ್ತೇನೆ.

ಭೂಯಸ್ಸುರಾಸ್ತಿಷ್ಯಯುಗೇ ನಿರಾಶನಾ
ನ್ನಿರೀಕ್ಷ್ಯ ಮಾರೀಚಗೃಹೇ ಶತಕ್ರತೋಃ |
ಸಂಭೂಯ ದೇವ್ಯಾ ಇತಿ ಸಪ್ತಧಾ ಮಯಾ
ಸುರಾನ್ ಭರಿಷ್ಯಾಮಿ ಚ ಶಾಕಸಂಕರ್ಯೈಃ || ||೧೩||

ಎಲೈ ದೇವತೆಗಳಿರಾ ಪುನಃ ನಾನು ಮಾರೀಚನ ಗೃಹದಲ್ಲಿ ಅವತರಿಸಿ ಸಪ್ತಮಾತೃಕಾ ರೂಪದಿಂದ ಕಲಿಯುಗದಲ್ಲಿ ನಿರಶನರಾಗಿರುವ ದೇವತೆಗಳನ್ನು ರಕ್ಷಿಸುತ್ತೇನೆ. ಅವರು ತಮ್ಮ ಆಹಾರಾದಿಗಳನ್ನು ಪಡೆಯುವಂತೆ ಮಾಡುತ್ತೇನೆ.

ಭೂಯೋ ವಿಪಕ್ಷಕ್ಷಪಣಾಯ ದೇವಾ
ವಿಂಧ್ಯೇ ಭವಿಷ್ಯಾಮ್ಯೃಷಿರಕ್ಷಣಾರ್ಥಂ |
ದುರ್ವೃತ್ತಚೇಷ್ಟಾನ್ನಿನಿಹತ್ಯ ದೈತ್ಯಾನ್
ಭೂಯಃ ಸಮೇಷ್ಯಾಮಿ ಸುರಾಜಯಂ ಹಿ || ||೧೪||

ಯದಾರುಣಾಕ್ಷೋ ಭವಿತಾ ಮಹಾಪುರಃ
ತದಾ ಭವಿಷ್ಯಾಮಿ ಹಿತಾಯ ದೇವತಾಃ |
ಮಹಾಲಿರೂಪೇಣ ವಿನಷ್ಟಜೀವಿತಂ
ಕೃತ್ವಾ ಸಮೇಷ್ಯಾಮಿ ಪುನಸ್ತ್ರಿವಿಷ್ಟಪಮ್ || ||೧೫||

ಅಸುರರು ಯಾವಾಗ ತಮ್ಮ ಕೆಂಪಾದ ತೀಕ್ಷ್ಣವಾದ ಕಣ್ಣುಗಳಿಂದ ಹುಟ್ಟು ವರೋ ಅವರನ್ನು ನಾಶಪಡಿಸಲೋಸುಗ ನಾನೂ ದೇವತೆಗಳ ಹಿತಕ್ಕಾಗಿ ಆವಿರ್ಭವಿಸುತ್ತೇನೆ. ಮಹಾವಿರೂಪದಿಂದ ಅವರನ್ನು ನಾಶಪಡಿಸಿ ಪುನಃ ನನ್ನ ಸ್ವಸ್ಥಾನವನ್ನು ಸೇರುತ್ತೇನೆ.*

**ಶಕ್ತಿಯ ಅವತಾರ**

ಶ್ರೀಸೂಕ್ತ, ದುರ್ಗಾಸೂಕ್ತ, ದೇವೀಸೂಕ್ತ, ಸರಸ್ವತೀ ಸೂಕ್ತ ಮತ್ತು ರಾತ್ರೀ ಸೂಕ್ತಗಳು ವೇದಗಳಲ್ಲಿ ಕಾಣಬರುವ ಶಕ್ತಿಯ ಅವತಾರವನ್ನು ವ್ಯಾಖ್ಯಾನಿಸುವ ಸೂಕ್ತಗಳಾಗಿವೆ.

**ಶ್ರೀ ಮತ್ತು ದುರ್ಗಾಸೂಕ್ತಗಳು**

ಶ್ರೀಸೂಕ್ತವು ಋಗ್ವೇದದ ಖಿಲಸೂತ್ರ. ಈ ಸೂತ್ರದಲ್ಲಿ ಮಹಾಲಕ್ಷ್ಮಿಯು ಶಕ್ತಿ, ಆನಂದ, ಕರ್ದಮ, ಚಿಕ್ಲಿತ ಋಷಿಗಳು, ನಾರಾಯಣೀ ವಿಶ್ವಮಾತೆಯಾಗಿ ಸ್ತುತಿಸಲ್ಪಟ್ಟಿರುತ್ತಾಳೆ. ಸುಖ, ಸಂತೋಷ, ಮತ್ತು ದಿವ್ಯಜ್ಞಾನಕ್ಕಾಗಿ ದೇವಿಯನ್ನು ಸ್ತುತಿಸಿರುವುದನ್ನು ಕಾಣಬಹುದಾಗಿದೆ.

**ದೇವೀಸೂಕ್ತ**

ಅಂಭೃಣಿ ಇದರ ಋಷಿ. ಅವಳು ತಾನೇ ಶಕ್ತಿಯೆಂದು ತನ್ನನ್ನು ತಾನೇ ಸ್ತುತಿಸಿಕೊಂಡಿದ್ದಾಳೆ. ಅದ್ವೈತತತ್ತ್ವದ ಭಾವಧಾರೆಯನ್ನು ಈ ಸೂಕ್ತದಲ್ಲಿ ಕಾಣಬಹುದಾಗಿದೆ. ನಾಲ್ಕು ಮಹಾವಾಕ್ಯಗಳೂ ಈ ಸೂತ್ರದ ಆಧಾರದಿಂದಲೇ ಬೆಳೆಗಿದವು.

**ರಾತ್ರೀ ಸೂಕ್ತ**

ಉಷೆಯ ಪ್ರಾರ್ಥನಾ ಸೂಕ್ತ. ಕತ್ತಲೆಯನ್ನು ತೆಗೆದು ಜ್ಞಾನವನ್ನು ನೀಡೆಂದು ಪ್ರಾರ್ಥಿಸುವ ಸೂಕ್ತ ಇದಾಗಿದೆ. ಇದನ್ನೇ ಉಷಃ ಸೂಕ್ತವೆಂದೂ ಕರೆಯುತ್ತಾರೆ.

---

* (ವಾಮನ ಪುರಣದಲ್ಲಿ 'ದೇವೀಮಹಾತ್ಮ್ಯ' ಎಂಬ ಐವತ್ತಾರನೆಯ ಅಧ್ಯಾಯದಲ್ಲಿ ದೊರೆಯುವ 'ದೇವೀಸ್ತುತಿ'ಯಿಂದ ಉದ್ಧರಿಸಲಾಗಿದೆ).

ಆಸ್ಥಾನ ವಿದ್ವಾನ್ ಸಂಕೀಘಟ್ಟಂ ವೆಂಕಟಾಚಾರ್ಯ, ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನ ಮಾಲ. ಸಂಖ್ಯೆ ೨೫. ಮೈಸೂರು ವ್ಯಾಸ ಪ್ರಣೀತ ಶ್ರೀವಾಮನ ಪುರಾಣಂ 1946 ಪುಟ 288 & 293.

ಕವಿಯ ಕಾವ್ಯಮಯ ವರ್ಣನೆಯ ಉತ್ತುಂಗ ಬೆಳವಣಿಗೆಯನ್ನು ಇಲ್ಲಿ ಕಾಣ ಬಹುದಾಗಿದೆ.

ಉಪನಿಷತ್ತುಗಳಲ್ಲಿಯೂ ಸಹ ಕೆಲವು ದೇವಿಯ ವರ್ಣನೆಯನ್ನು ಮಾಡುವಪ್ರ ಗಳಾಗಿವೆ.

### ಭವ್ರಿಚೋಪನಿಷದ್

ಇದರಲ್ಲಿ ದೇವಿಯನ್ನು ಜಗನ್ಮಾತೆಯೆಂದು ಸ್ತುತಿಸಲಾಗಿದೆ. ಇವಳು ಪರಾಶಕ್ತಿ. ಇವಳು ಲೋಕ ಕಲ್ಯಾಣಿ, ಲೋಕ ಕತ್ರಿ, ಮತ್ತು ಲೋಕಭೋಕ್ತ್ರಿ, ಪ್ರಣವದ ಸಾರ ಸರ್ವವೇ ಇವಳು. ಇವಳು ಮಹಾತ್ರಿಪುರಸುಂದರಿ, ಜ್ಞಾನದ ಆದಿ, ನಾಲ್ಕು ಮಹಾ ವಾಕ್ಯಗಳಾದ ಪ್ರಜ್ಞಾನಂ ಬ್ರಹ್ಮ, ಅಹಂ ಬ್ರಹ್ಮಾಸ್ಮಿ, ತತ್ತ್ವಮಸಿ, ಮತ್ತು ಅಯಮಾತ್ಮಾ ಬ್ರಹ್ಮ ಇವುಗಳ ಸಾರಸರ್ವಸ್ವವಾಗಿರುತ್ತಾಳೆ.

ಇವಳು ಪರಬ್ರಹ್ಮದ ರೂಪವಾಗಿ ಬಿಂಬಿಸಿರುತ್ತಾಳೆ. ಈ ವಿಶ್ವವು ದೇವಿಯ ವಿವಿಧ ರೂಪಗಳು. ಷೋಡಶೀ, ಶ್ರೀವಿದ್ಯಾ, ಪಂಚದಶಾಕ್ಷರೀ, ಮಹಾತ್ರಿಪುರ ಸುಂದರೀ, ಬಲ, ಅಂಬಿಕೆ, ಬಗಲಾ, ಮಾತಂಗೀ, ಸ್ವಯಂವರಾ, ಕಲ್ಯಾಣಿ, ಭುವನೇಶ್ವರೀ, ಚಾಮುಂಡೀ, ವಾರಾಹೀ, ಶ್ಯಾಮಲಾ, ಅಶ್ವಾರೂಢಾ, ಸಾವಿತ್ರೀ, ಗಾಯತ್ರೀ, ಸರಸ್ವತೀ ಮತ್ತು ಬ್ರಹ್ಮಾನಂದಕಲಾ ಎಂದು ದೇವಿಯನ್ನು ಸ್ತುತಿಸಲಾಗಿದೆ.

### ತ್ರಿಪುರೋಪನಿಷದ್

ಇದನ್ನು ಮಹೋಪನಿಷತ್ ಎಂದೂ ಕರೆಯುತ್ತಾರೆ. ತ್ರಿಪುರ ಸುಂದರಿಯು ಪ್ರಣವ ಮಂತ್ರವಾಗಿ ಹೇಗೆ ಲೋಕವನ್ನು ವ್ಯಾಪಿಸಿದ್ದಾಳೆ ಎಂಬುದನ್ನು ವಿವರಿಸುತ್ತದೆ. ಭುವನೇಶ್ವರೀ ಬೀಜ ಮಂತ್ರವಾದ 'ಹ್ರೀಂ' ಓಂಕಾರವೇ ಎಂದು ಸಾರುತ್ತದೆ. ಇದರಲ್ಲಿ, ಶ್ರೀ ಚಕ್ರದ ವರ್ಣನೆಯನ್ನು ಕಾಣುತ್ತೇವೆ. ಇದರಲ್ಲಿ ಭುವನೇಶ್ವರೀ ಮಂತ್ರ (ಹ್ರೀಂ) ಪಂಚಾಕ್ಷರೀಮಂತ್ರ ಮತ್ತು ಶ್ರೀವಿದ್ಯಾ, ನವಾಕ್ಷರೀಮಂತ್ರಗಳ ಉಗಮವನ್ನು ಕಾಣಬಹುದಾಗಿದೆ.

### ಭಾವನೋಪನಿಷದ್

ಶ್ರೀ ಲಲಿತಾ ಸಹಸ್ರನಾಮವು ಓಂ ಭಾವನಾ ಗಾಯೈತ್ರ್ಯೈ ನಮಃ, ಭಾವಗಮ್ಯಾಯೈ ನಮಃ ಎಂದು ಸ್ತುತಿಸುತ್ತದೆ. ಭಕ್ತನು ಧ್ಯಾನವಶನಾಗಿ ಸ್ತುತಿಸಲು ಕಾರಣವಾಗಿದೆ. ತನ್ನ ಧ್ಯಾನದಿಂದ ಕೊನೆಗೆ ದೇವಿಯಲ್ಲಿ ಐಕ್ಯವಾಗುವ ಮಾರ್ಗವನ್ನು ಸೂಚಿಸುತ್ತದೆ. ಇಲ್ಲಿ ಮಾನಸಿಕ ಪೂಜೆಗೆ ಪ್ರಾಶಸ್ತ್ಯನೀಡಲಾಗಿದೆ. ದೇವಿಯಲ್ಲಿ ಮನಸ್ಸನ್ನು ಕೇಂದ್ರೀಕರಿಸುವುದರಿಂದ ಸಾತ್ವಿಕ ಭಾವನೆಯಿಂದ ಕೊನೆಯಲ್ಲಿ ಸಹಸ್ರಕಮಲದಲ್ಲಿ ಐಕ್ಯವಾಗುವ ವಿವರಣೆಯನ್ನು ನೀಡಲಾಗಿದೆ. ಇದನ್ನು 'ಶ್ರೀಮಂತ್ರಮಾತೃಕಾ ಪುಷ್ಪಮಾಲಾಸ್ತವ' ದಲ್ಲಿ ವಿವರವಾಗಿ ವಿವರಿಸಲಾಗಿದೆ.

[illegible] ಶಕ್ತಿಯನ್ನು ಮಂತ್ರದ ಮುಖಾಂತರ ಆಹ್ವಾನಿಸುವುದನ್ನು ಕಾಣಬಹುದಾಗಿದೆ. ಇದರಲ್ಲಿ ಲಲಿತಾಸಹಸ್ರನಾಮ, ಪಂಚದಶಾಕ್ಷರೀ, ನಿತ್ಯಷೋಡಶಿ ಕಾರ್ಣವಾ ಮೊದಲಾದವುಗಳು ತಾಂತ್ರಿಕ ರೂಪದಲ್ಲಿ ಪೂಜಿಸುವುದನ್ನು ಗುರುತಿಸಬಹುದಾಗಿದೆ. ಯೋಗಾಭ್ಯಾಸದಿಂದ ಕುಂಡಲಿನೀ ಶಕ್ತಿಯನ್ನು ಸುಷಮ್ನಾನಾಡಿಯಿಂದ ಸಹಸ್ರಕಮಲದತ್ತ ಕೊಂಡೊಯ್ಯುವ ಮಾರ್ಗವನ್ನು ನಿರ್ದೇಶಿಸುತ್ತದೆ. ಈ ಯೋಗಾಭ್ಯಾಸದಿಂದ ಯೋಗಿಯು ದೇವಿಯ ದರ್ಶನ ಪಡೆದು ದೇವಿಯಲ್ಲಿ ಲೀನನಾಗುತ್ತಾನೆ.*



---

* ವರದಾಚಾರಿ ಚಟಗೋಪನ್ Shakti in Vedic Literature, Tatvaloka Nov 1994 ಲೇಖನದಿಂದ ಸಂಗ್ರಹಿಸಲಾಗಿದೆ.

ಅಧ್ಯಾಯ

# ಸಪ್ತಮಾತೃಕೆಯರ ಧ್ಯಾನಶ್ಲೋಕಗಳು

## ಅಥ ಬ್ರಾಹ್ಮೀದೇವತಾಧ್ಯಾನಮ್ :



ತತ್ರ ಬ್ರಾಹ್ಮೀ ಚತುರ್ವಕ್ತ್ರಾ ಷಡ್ಭುಜಾ ಹಂಸಸಂಸ್ಥಿತಾ |
ಪಿಂಗಾಭಾ ಭೂಷಣೋಪೇತಾ ಮೃಗಚರ್ಮೋತ್ತರೀಯಕಾ ||
ವರಂ ಸೂತ್ರಂ ಸ್ರುವಂ ಧತ್ತೇ ದಕ್ಷಬಾಹುತ್ರಯೇ ಕ್ರಮಾತ್ |
ವಾಮೇ ತು ಪುಸ್ತಕಂ ಕುಂಡೀಂ ಬಿಭ್ರತೀ ಚಾಭಯಪ್ರದಮ್ ||

ಬ್ರಾಹ್ಮಿಯು ನಾಲ್ಕು ಮುಖಗಳನ್ನುಳ್ಳವಳು, ಆರು ಭುಜಗಳಿರುವ ಆ ದೇವತೆಯು ಹಂಸಾರೂಢೆಯಾಗಿದ್ದಾಳೆ, ಹಳದಿ ವರ್ಣದಿಂದ ಶೋಭಿತೆ. ಭೂಷಣಗಳಿಂದ ಕೂಡಿರುವವಳು. ಕೃಷ್ಣಮೃಗದ ಚರ್ಮವನ್ನು ಉತ್ತರೀಯವಾಗಿ ಧರಿಸಿರುವವಳು. ವರದ ಮುದ್ರೆ, ಅಕ್ಷಮಾಲೆ, ಸ್ರುವ (ಯಜ್ಞಸಾಧನ ಪಾತ್ರೆ) ಇವುಗಳನ್ನು ಬಲಗೈಯಲ್ಲಿ ಧರಿಸಿರುವವಳು ಎಡಗೈಯಲ್ಲಿ ಪುಸ್ತಕ, ಸಣ್ಣಪಾತ್ರೆ, ಹಾಗೂ ಅಭಯಮುದ್ರೆಯನ್ನು ಧರಿಸಿರುವವಳು (ಪೀತ ವರ್ಣ)

(ನೃಸಿಂಹ ಪ್ರಾಸಾದ ಎಂಬ ಗ್ರಂಥದಲ್ಲಿ ವರ್ಣಿತವಾಗಿರುವಂತೆ)

## ಅಥ ಮಾಹೇಶ್ವರೀದೇವತಾಧ್ಯಾನಮ್



ಮಾಹೇಶ್ವರೀ ವೃಷಾರೂಢಾ ಪಂಚವಕ್ತ್ರಾ ತ್ರಿಲೋಚನಾ |
ಶ್ವೇತವರ್ಣಾ ದಶಭುಜಾ ಚಂದ್ರರೇಖಾವಿಭೂಷಿತಾ ||
ಖಡ್ಗಂ ವಜ್ರಂ ತ್ರಿಶೂಲಂ ಚ ಪರಶುಂ ಚಾಭಯಂ ವರಮ್ |
ಪಾಶಂ ಘಂಟಾಂ ತಥಾ ನಾಗಮಂಕುಶಂ ಬಿಭ್ರತೀ ಕರೈಃ ||

ಮಾಹೇಶ್ವರಿಯು ವೃಷಭಾರೂಢಳು, ಪಂಚಮುಖದಿಂದ ಸುಶೋಭಿತಳು, ಮೂರು ಕಣ್ಣುಗಳುಳ್ಳವಳು, ಧವಲವರ್ಣ, ಹತ್ತು ಭುಜಗಳಿಂದ ಕೂಡಿರುವವಳು, ಚಂದ್ರರೇಖೆಯಿಂದ ಅಲಂಕೃತಳಾಗಿದ್ದಾಳೆ. ಕೈಗಳಲ್ಲಿ ಖಡ್ಗ, ವಜ್ರ, ತ್ರಿಶೂಲ, ಕೊಡಲಿ, ಅಭಯ ಮುದ್ರೆ, ವರದ ಮುದ್ರೆ, ಪಾಶ, ಘಂಟೆ, ಸರ್ಪ, ಅಂಕುಶ ಇವುಗಳನ್ನು ಧರಿಸಿರುವವಳು (ಧವಲವರ್ಣ).

## ಅಥ ಕೌಮಾರೀದೇವತಾಧ್ಯಾನಮ್



ಷಡಾನನಾ ತು ಕೌಮಾರೀ ಪಾಟಲಾಭಾ ಸುಶೀಲಕಾ |
ರವಿಬಾಹುರ್ಮಯೂರಸ್ಥಾ ವರದಾ ಶಕ್ತಿಧಾರಣೀ ||
ಪತಾಕಾಂ ಬಿಭ್ರತೀ ದಂಡಂ ಪಾತ್ರಂ ಬಾಣಂ ಚ ದಕ್ಷಿಣೇ |
ವಾಮೇ ಚಾಪಮಥೋ ಘಂಟಾಂ ಕಮಲಂ ಕುಕ್ಕುಟಂ ತಥಾ |
ಪರಶುಂ ಬಿಭ್ರತೀ ಚೈವ ತದಧಸ್ತ್ವಭಯಾನ್ವಿತಾ ||

ಕೌಮಾರಿಯು ಆರು ಮುಖ ಉಳ್ಳವಳು, ಕೆಂಪು ಮೈಬಣ್ಣ, ಸುಗುಣಾನ್ವಿತೆ, ಹನ್ನೆರಡು ಬಾಹುಗಳು ಉಳ್ಳವಳು, ಮಯೂರವಾಹನೆ, ವರದ ಮುದ್ರೆ, ಶಕ್ತಿ (ಆಯುಧ) ಪತಾಕೆ, ದಂಡ, ಪಾತ್ರ, ಬಾಣ, ಇವುಗಳನ್ನು ಬಲಭುಜಗಳಲ್ಲೂ, ಎಡಭುಜಗಳಲ್ಲಿ ಬಿಲ್ಲು, ಘಂಟೆ, ಕಮಲ, ಕುಕ್ಕುಟ, ಪರಶು, ಹಾಗೂ ಅಭಯ ಮುದ್ರೆಯನ್ನು ಧರಿಸಿರುವವಳೂ ಆಗಿದ್ದಾಳೆ. (ಪಾಟಲವರ್ಣ).



ವೈಷ್ಣವೀ ತಾರ್ಕ್ಷ್ಯಗಾ ಶ್ಯಾಮಾ ಷಡ್ಭುಜಾ ವನ ಮಾಲಿನೀ |
ವರದಾ ಗದಿನೀ ದಕ್ಷೇ ಬಿಭ್ರತೀ ಚ ಕರೇಽಂಬುಜಮ್ |
ಶಂಖಚಕ್ರಾಭಯಾನ್ವಾಮೇ ಸಾಚೇಯಂ ವಿಲಸದ್ಭುಜಾ ||

ವೈಷ್ಣವೀ ದೇವತೆಯು ಗರುಡಗಾಮಿನಿ, ಶ್ಯಾಮವರ್ಣೆ, ಆರು ಭುಜಗಳನ್ನುಳ್ಳವಳು. ವನಮಾಲಾಧಾರಿಣಿ, (ಎಂದೆಂದೂ ಬಾಡದ ಮಾಲಿಕೆ ವನಮಾಲಿಕೆ ) ಬಲಕೈಗಳಲ್ಲಿ ವರದ ಮುದ್ರೆ , ಗದೆ ಮತ್ತು ಕಮಲವನ್ನು ಧರಿಸಿರುತ್ತಾಳೆ, ಎಡ ಕೈಗಳಲ್ಲಿ ಶಂಖ, ಚಕ್ರ, ಮತ್ತು ಅಭಯ ಮುದ್ರೆಯನ್ನು ಧರಿಸಿರುವವಳು, ಓರೆ ನೋಟದಿಂದ ನೋಡುವವಳು, ಹೊಳೆಯುವ ಭುಜಗಳುಳ್ಳವಳೂ ಆಗಿದ್ದಾಳೆ. (ನೀಲವರ್ಣ)

## ಅಥ ವಾರಾಹೀದೇವತಾಧ್ಯಾನಮ್



ಕೃಷ್ಣವರ್ಣಾ ತು ವಾರಾಹೀ ಮಹಿಷಸ್ಥಾ ಮಹೋದರೀ |
ವರದಾ ದಂಡಿನೀ ಖಡ್ಗಂ ಬಿಭ್ರತೀ ದಕ್ಷಿಣೇ ಕರೇ |
ಖೇಟಪಾತ್ರಾಭಯಾನ್ವಾಮೇ ಸೂಕರಾಸ್ಯಾ ಲಸದ್ಭುಜಾ ||

ವಾರಾಹಿಯು ಶ್ಯಾಮವರ್ಣೆ, ಕೋಣನನ್ನು ವಾಹನವಾಗಿ ಉಳ್ಳವಳು, ಅವಳು ದೊಡ್ಡದಾದ ಹೊಟ್ಟೆಯನ್ನುಳ್ಳವಳು. ಬಲಗೈಗಳಲ್ಲಿ ವರದ ಮುದ್ರೆ, ದಂಡ, ಖಡ್ಗಗಳನ್ನು ಧರಿಸಿರುವವಳು, ಎಡಗೈಗಳಲ್ಲಿ ಗುರಾಣಿ, ಪಾತ್ರೆ, ಅಭಯ ಮುದ್ರೆಗಳನ್ನು ಧರಿಸಿರುವವಳು ಅವಳ ಮುಖವು ವರಾಹದ ಮುಖದಂತಿದ್ದು ಬಾಹುಗಳು ಕಾಂತಿಯುಕ್ತವಾಗಿವೆ (ಕೃಷ್ಣವರ್ಣ).



ಐಂದ್ರೀ ಸಹಸ್ರದೃಕ್ ಸೌಮ್ಯಾ ಹೇಮಾಭಾ ಗಜಸಂಸ್ಥಿತಾ |
ವರದಾ ಸೂತ್ರಿಣೀ ವಜ್ರಂ ಬಿಭ್ರತ್ಯೂರ್ಧ್ವಂ  ತು ದಕ್ಷಿಣೇ |
ವಾಮೇ ತು ಕಮಲಂ ಪಾತ್ರಂ ಹ್ಯಭಯಂ ತದಧಃ ಕರೇ ||

ಇಂದ್ರಾಣಿಯು ಸಾವಿರ ಕಣ್ಣುಗಳುಳ್ಳವಳು, ಸೌಮ್ಯಳಾಗಿ (ಮೃದು ಸ್ವಭಾವದಿಂದ ಕೂಡಿ) ಚಿನ್ನದಂತೆ ಕಾಂತಿಯುಕ್ತಳಾಗಿದ್ದಾಳೆ. ಆನೆಯ ಮೇಲೆ ಆಸೀನಳಾಗಿರುವಳು. ಬಲದ ಕೈಗಳಲ್ಲಿ ವರದಮುದ್ರೆ, ಸೂತ್ರ, ಹಾಗೂ ವಜ್ರ (ಆಯುಧ) ವನ್ನು ಮೇಲ್ಭಾಗದಲ್ಲಿ ಧರಿಸಿದುವವಳು. ಎಡಗೈಗಳಲ್ಲಿ ಕಮಲ, ಪಾತ್ರೆ, ಹಾಗೂ ಕೆಳಭಾಗದ ಕೈಯಲ್ಲಿ ಅಭಯ ಮುದ್ರೆಯನ್ನು ಧರಿಸಿರುವವಳಾಗಿದ್ದಾಳೆ (ಕನಕವರ್ಣ).

## ಅಥ ಚಂಡಿಕಾಧ್ಯಾನಮ್



ಚಂಡಿಕಾ ಶ್ವೇತವರ್ಣಾ ಸಾ ಶಿವರೂಪಾ ಚ ಸಿಂಹಗಾ |
ಜಟಿಲಾ ವರ್ತುಲತ್ರ್ಯಕ್ಷಾ ವರದಾ ಶೂಲಧಾರಿಣೀ |
ಕರ್ತ್ರಿಕಾಂ ಬಿಭ್ರತೀ ದಕ್ಷೇ ಪಾಶಪಾತ್ರಭಯಾನ್ವಿತಾ ||

ಚಂಡಿಕೆಯು ಧವಲವರ್ಣ ಉಳ್ಳವಳು, ಮಂಗಳಸ್ವರೂಪಿಣಿ, ಸಿಂಹಗಾಮಿನಿ, ಜಟಾಯುತೆ , ದುಂಡಾದ ಮೂರು ಕಣ್ಣುಗಳುಳ್ಳವಳು, ವರದಮುದ್ರೆ, ಶೂಲ, ಕರ್ತ್ರಿಕಾ (ಸಣ್ಣದಾದ ಕತ್ತರಿ) ಇವುಗಳನ್ನು ಬಲಗೈಗಳಲ್ಲೂ, ಎಡಗೈಗಳಲ್ಲಿ ಪಾಶ, ಪಾತ್ರ, ಅಭಯ ಮುದ್ರೆ, ಇವುಗಳಿಂದ ಕೂಡಿರುವವಳು (ಶ್ವೇತವರ್ಣ).

ಅಧ್ಯಾಯ ೫

# ಸಪ್ತಮಾತೃಕಾಮಹಿಮೆ

**ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ |**
**ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತ ಮಾತರಃ || ***

ವಿಶ್ವದಲ್ಲಿಯೇ ಅತಿಪ್ರಾಚೀನತಮವಾದುದು ವೇದಸಾಹಿತ್ಯ. ವೇದಗಳು ಭಾರತೀಯ ತತ್ವದ ತಳಹದಿ. ವೇದದ ಆಧಾರದ ಮೇಲೆ ಭಾರತೀಯರ ಸಂಸ್ಕೃತಿ ಅರಳಿದೆ. ವೇದಗಳಲ್ಲಿ ಭಾರತೀಯ ಜೀವನದ ಆದರ್ಶಗಳು ಬಹು ಪ್ರಧಾನವಾಗಿ ಬಿಂಬಿಸಿವೆ. ಈ ಪುರಾತನ ವೇದಸಾಹಿತ್ಯ ಅಗಾಧವಾದ ಜ್ಞಾನಭಂಡಾರ. ವಿಶ್ವದ ಯಾವ ಸಂಸ್ಕೃತಿಯೂ ಪಡೆದಿಲ್ಲದಂತಹ ಅದ್ಭುತ ಜ್ಞಾನಸಂಪತ್ತನ್ನು ಪಡೆದಿರುವುದರಿಂದಲೇ ಭಾರತೀಯ ಸಂಸ್ಕೃತಿ ಬದುಕಿ ಬೆಳೆಯುತ್ತಿದೆ. ಭಾರತೀಯ ಸಂಸ್ಕೃತಿಯನ್ನು ಉಳಿದೆಲ್ಲ ಸಂಸ್ಕೃತಿಗಳ ತಾಯಿ ಎಂದು ಕರೆಯುವಂತೆ ಮಾಡಿದುದು ವೇದಸಾಹಿತ್ಯ. ವಿಶ್ವದೆಲ್ಲೆಡೆ ವೇದಸಾಹಿತ್ಯಕ್ಕೆ ದೊರೆಯುವ ಗೌರವ, ಮಾನ್ಯತೆ ಉಳಿದ ಯಾವುದೇ ಸಾಹಿತ್ಯಕ್ಕೆ ದೊರೆಯುವುದಿಲ್ಲ. ಇಂದಿನಯುಗ ಧರ್ಮದ ಪ್ರತಿ ಪಾದನೆಯನ್ನು ಆಗಲೇ ನಮ್ಮ ಋಷಿಪುಂಗವರು ಮಾಡಿ ಸರಿಯಾದ ದಾರಿ ತೋರಿದ್ದಾರೆ. ವೇದಗಳಲ್ಲಿ ಹೇಳಿರುವ ತತ್ತ್ವಗಳು ಕಾಲಕ್ಕೆ ತಕ್ಕಂತೆ ಬದಲಾವಣೆ ಹೊಂದುತ್ತಾ ಮಾರ್ಗದರ್ಶನ ಮಾಡುತ್ತಿವೆ. ಭಾರತೀಯ ದರ್ಶನಶಾಸ್ತ್ರದ ಪರಿಚಯ ಪಡೆಯಲು ವೇದಗಳೇ ಆಧಾರ. ವೇದಗಳಿಗಿಂತ ಪುರಾತನವಾದುದು ಯಾವುದೂ ಇಲ್ಲ. ಆದುದರಿಂದ ಯಾವುದೇ ತತ್ತ್ವ ವೇದಗಳಿಂದ ಪ್ರಾರಂಭವಾದುದೆಂದರೆ ಅದಕ್ಕಿಂತ ಪುರಾತನವಾದುದು ಇನ್ನು ಬೇರೊಂದಿರಲು ಸಾಧ್ಯವಿಲ್ಲ.

ಋಗ್ವೇದಸಂಹಿತೆಯಲ್ಲಿ ಪ್ರಥಮ ಬಾರಿಗೆ ದೇವಿಯ ಮಹಿಮೆಯನ್ನು ನಾವು ಕಾಣುತ್ತೇವೆ. ದೇವಿಯನ್ನು ಸರ್ವಶಕ್ತಳೆಂದೂ, ಲೋಕರಕ್ಷಕಳೆಂದೂ, ಮಂತ್ರ ದ್ರಷ್ಟಾರರುಗಳು ವರ್ಣಿಸಿದ್ದಾರೆ. ಅಂದರೆ ದೇವಿಯ ಪೂಜೆ ಇಂದಿನದಲ್ಲ ಮಾನವನ ಉಗಮದಷ್ಟೇ ಪುರಾತನವಾದುದು.

ದೇವಿಯ ಉಪಾಸನೆಯನ್ನು ಕೇವಲ ತಾಂತ್ರಿಕವೆಂದು ತಿಳಿಯಬಾರದು. ದೇವಿಯು ಸರ್ವಶಕ್ತಳು. ಲೋಕರಕ್ಷಕಿ, ಎಂದೇ ವೈದಿಕಸಾಹಿತ್ಯದಲ್ಲಿ ವಿವರಿಸಲಾಗಿದೆ. ಪುರುಷ ಶಕ್ತಿಯು ಸೋಲನ್ನೊಪ್ಪಿದಾಗ ಅದೇ ಶಕ್ತಿಯು ಕಾಲಕ್ಕೆ ಅನುಗುಣವಾಗಿ ಸ್ತ್ರೀರೂಪವಾಗಿ ಲೋಕವನ್ನು ರಕ್ಷಿಸಿ ಭಕ್ತರನ್ನು ಉದ್ಧರಿಸಿದೆ ಅದರಿಂದಲೇ ಸ್ತ್ರೀ ಲೋಕಮಾತೆ, ಜಗಜ್ಜನನಿ, ಲೋಕ ವಂದ್ಯೆ.

---

* (ಅಮರ ಕೋಶ - ಪ್ರಥಮಕಾಂಡ ಸ್ವರ್ಗವರ್ಗ - ೪೧ನೇ ಶ್ಲೋಕ. ಮೈ.ವಿ.ವಿ.ನಿ. ಪ್ರಸಾರಾಂಗ ಪ್ರಕಟಣೆ 1891 ಪುಟ-8).

ಋಗ್ವೇದದ ಹತ್ತನೆಯ ಮಂಡಲದಲ್ಲಿ ನೂರ ಇಪ್ಪತ್ತೈದನೇ ಮಂತ್ರ ದೇವಿಯನ್ನು ಕುರಿತುದಾಗಿದೆ. ವೈದಿಕಯುಗದಲ್ಲಿ ಅಂಭೃಣ ಎಂಬ ಮಹರ್ಷಿಯಿದ್ದರು. ಅವರಿಗೆ ಬ್ರಹ್ಮವಿದುಷಿಯಾದ ವಾಕ್ ಎಂಬ ಮಗಳಿದ್ದಳು. ಅವಳೇ ದೇವೀ ಸೂಕ್ತದ ಋಷಿ, ಸಚ್ಚಿದಾನಂದ ಸ್ವರೂಪನಾದ ಪರಮಾತ್ಮನೇ ದೇವತೆ. ಪರಮಾತ್ಮನೊಂದಿಗೆ ಐಕ್ಯವನ್ನು ಅನುಭವಿಸುತ್ತಿರುವ ಆ ಋಷಿಪುತ್ರಿಯು ಸರ್ವ ಜಗದ್ರೂಪಿನಿಂದ ಸಮಸ್ತ ಕಾರ್ಯಗಳ ಅದಿಷ್ಠಾತೃವೇ ತಾನಾಗಿರುವೆನೆಂದು ಭಾವಿಸಿ ತನ್ನನ್ನು ತಾನೇ ಸ್ತುತಿಸಿ ಕೊಂಡಿದ್ದಾಳೆ

# ದೇವೀ ಸೂಕ್ತಮ್

ಋಗ್ವೇದ ಸಂಹಿತೆ

(ಮಂಡಲ ೧೦ ಅನುವಾಕ ೧೨೫ ಸೂತ್ರ ೧)

**ಓಮ್ ಅಹಮಿತ್ಯಷ್ಟರ್ಚಸ್ಯ ಸೂಕ್ತಸ್ಯ ವಾಗಾಂಭೃಣೀ ಋಷಿಃ**
**ಸಚ್ಚಿತ್ಸುಖಾತ್ಮಕಃ ಸರ್ವಗತಃ ಪರಮಾತ್ಮಾ ದೇವತಾ, ದ್ವಿತೀಯಾಯಾ**
**ಋಚೋ ಜಗತೀ ಶಿಷ್ಟಾನಾಂ ತ್ರಿಷ್ಟುಪ್ ಛಂದಃ ||**

## ಧ್ಯಾನಮ್

**ಓಂ ಸಿಂಹಸ್ಥಾ ಶಶಿಶೇಖರಾ ಮರಕತಪ್ರಖ್ಯೈಶ್ಚತುರ್ಭಿರ್ಭುಜೈಃ**
**ಶಂಖಂ ಚಕ್ರಧನುಶ್ಶರಾಂಶ್ಚ ದಧತೀ ನೇತ್ರೈಸ್ತ್ರಿಭಿಶ್ಶೋಭಿತಾ |**
**ಆಮುಕ್ತಾಂಗದಹಾರಕಂಕಣರಣತ್ಕಾಂಚೀರಣನ್ನೂಪುರಾ**
**ದುರ್ಗಾ ದುರ್ಗತಿಹಾರಿಣೀ ಭವತು ನೋ ರತ್ನೋಲ್ಲಸತ್ಕುಂಡಲಾ ||**

ಸಿಂಹದ ಮೇಲೆ ಕುಳಿತಿರುವವಳೂ, ಚಂದ್ರನನ್ನು ತಲೆಯಲ್ಲಿ ಧರಿಸಿರುವವಳೂ, ಮರಕತ ಮಣಿಯಂತೆ ಕಾಂತಿಯುಳ್ಳ ತನ್ನ ನಾಲ್ಕು ಭುಜಗಳಲ್ಲಿಯೂ ಶಂಖ, ಚಕ್ರ, ಧನುಸ್ಸು,ಬಾಣಗಳನ್ನು ಧರಿಸಿರುವವಳೂ, ಮೂರು ಕಣ್ಣುಗಳಿಂದ ಶೋಭಿಸುತ್ತಿರುವವಳೂ, ಮುಕ್ತಾಫಲದಿಂದ ಮಾಡಿರುವ ಕೇಯೂರ ಕಂಕಣಗಳನ್ನು ಧರಿಸಿರುವವಳೂ, ಗಣ-ಗಣನಿನಾದ ಮಾಡುವ ಗೆಜ್ಜೆಯಿಂದ ಪರಿಶೋಭಿಸಿರುವವಳೂ, ಹೊಳೆಯುತ್ತಿರುವ ರತ್ನಕುಂಡಲಗಳನ್ನು ಧರಿಸಿರುವವಳೂ ಆದ ದುರ್ಗೆಯು ನಮ್ಮ ದುರ್ಗತಿಯನ್ನು ಹೋಗಲಾಡಿಸಲಿ.

*(ಋಗ್ವೇದದಲ್ಲಿ ಈ ಧ್ಯಾನ ಶ್ಲೋಕವು ಉಕ್ತವಾಗಿಲ್ಲ. ಸಂಪ್ರದಾಯಬದ್ಧವಾಗಿ ಬೆಳೆದು ಬಂದಿರುವ ಈ ಧ್ಯಾನ ಶ್ಲೋಕವು ಉಕ್ತವಾಗಿರುವುದರಿಂದ ಧ್ಯಾನ ಸ್ತೋತ್ರವನ್ನು ಸೇರಿಸಲಾಗಿದೆ.)*

*ಮೂಲರೂಪವನ್ನು ಋಗ್ವೇದ ಸಂಹಿತೆಯಲ್ಲಿ ಕಾಣಬಹುದು(೧೮.)*

ಅಹಂ ರುದ್ರೇಭಿರ್ವಸುಭಿಶ್ಚರಾಮಿ
ಅಹಮಾದಿತ್ಯೈರುತ ವಿಶ್ವದೇವೈಃ |
ಅಹಂ ಮಿತ್ರಾವರುಣೋಭಾ ಬಿಭರ್ಮಿ
ಅಹಮಿಂದ್ರಾಗ್ನೀ ಅಹಮಶ್ವಿನೋಭಾ || ||೧||

ನಾನು ರುದ್ರರು, ವಸುಗಳು, ಆದಿತ್ಯರು ಮತ್ತು ವಿಶ್ವೇದೇವತೆಗಳೊಡನೆ ಸಂಚರಿಸುತ್ತೇನೆ. ನಾನು ಮಿತ್ರ, ವರುಣ, ಇಂದ್ರ, ಅಗ್ನಿ ಇವರನ್ನೂ ಮತ್ತು ಅಶ್ವಿನೀ ದೇವತೆಗಳನ್ನು ಪೋಷಿಸುತ್ತೇನೆ.

ಅಹಂ ಸೋಮ ಮಾಹನಸಂ ಬಿಭರ್ಮಿ
ಅಹಂ ತ್ವಷ್ಟಾರಮುತ ಪೂಷಣಮ್ ಭಗಮ್ |
ಅಹಂ ದಧಾಮಿ ದ್ರವಿಣಂ ಹವಿಷ್ಮತೇ
ಸುಪ್ರಾವ್ಯೇ ಯಜಮಾನಾಯ ಸುನ್ವತೇ || ||೨||

ನಾನು ಸೋಮರಸವನ್ನೂ ತ್ವಷ್ಟೃ, ಭಗ ಮತ್ತು ಪೂಷನ್ ಇವರುಗಳನ್ನು ಧರಿಸಿರುತ್ತೇನೆ. ಹವಿಸ್ಸನ್ನೂ, ಸೋಮವನ್ನೂ ಸಿದ್ಧಪಡಿಸಿ ದೇವತೆಗಳನ್ನು ತೃಪ್ತಿ ಪಡಿಸುವ ಯಜಮಾನನಿಗೆ ನಾನು ಸಂಪತ್ತನ್ನು ಅನುಗ್ರಹಿಸುತ್ತೇನೆ.

ಅಹಂ ರಾಷ್ಟ್ರೀ ಸಂಗಮನೀ ವಸೂನಾಂ
ಚಿಕಿತುಷೀ ಪ್ರಥಮಾ ಯಜ್ಞಿಯಾನಾಮ್ |
ತಾಂ ಮಾ ದೇವಾ ವ್ಯದಧುಃ ಪುರುತ್ರಾ
ಭೂರಿಸ್ಥಾತ್ರಾಂ ಭೂರ್ಯಾವೇಶಯಂತೀಮ್ || ||೩||

ನಾನೇ ಈಶ್ವರಿಯು, ಧನವನ್ನು ಹಂಚಿಕೊಂಡವಳೂ ನಾನೇ, ನಾನು ಜ್ಞಾನವಂತಳು, ಯಜ್ಞಯೋಗ್ಯರಾದ ದೇವತೆಗಳ ನಡುವೆ ನಾನೇ ಮೊದಲಿಗಳು. ಪ್ರಪಂಚರೂಪದಲ್ಲಿ ಅವಸ್ಥಿತಳಾದ ಮತ್ತು ಭೂತಗಳಲ್ಲಿ ಜೀವ ರೂಪದಿಂದ ಪ್ರವಿಷ್ಟಳಾದ ಇಂತಹ ನನ್ನನ್ನು ದೇವತೆಗಳು ನಾನಾ ಸ್ಥಾನಗಳಲ್ಲಿ ಇಟ್ಟಿರುವರು.

*(ಈ ಮಂತ್ರದ ವ್ಯಾಖ್ಯೆಯನ್ನು ವಿವರವಾಗಿ ಹಲವಾರು, ಸಹಸ್ರನಾಮ ಗಳಲ್ಲಿಯೂ, ಮಹಾಭಾರತದಲ್ಲಿಯೂ, ಹಲವಾರು ಪುರಾಣಗಳಲ್ಲಿಯೂ ವಿಸ್ತೃತವಾಗಿ ಬೆಳೆದಿರುವುದನ್ನು ಅರಿಯಬಹುದು)*

ಮಯಾಸೋಽನ್ನಮತ್ತಿ ಯೋ ವಿಪಶ್ಯತಿ
ಯಃ ಪ್ರಾಣಿತಿ ಯ ಈಂ ಶೃಣೋತ್ಯುಕ್ತಮ್ |
ಅಮಂತವೋ ಮಾಂ ತ ಉಪ ಕ್ಷಿಯಂತಿ
ಶ್ರುಧಿ ಶ್ರುತ ಶ್ರದ್ಧಿವಂ ತೇ ವದಾಮಿ || ||೪||

ಯಾವನು ಅನ್ನವನ್ನು ತಿನ್ನುತ್ತಾನೆಯೋ, ನೋಡುತ್ತಾನೆಯೋ, ಉಸಿರಾಡುತ್ತಾನೆಯೋ, ಹೇಳಿದುದನ್ನು ಕೇಳುತ್ತಾನೆಯೋ ಅವನು ನನ್ನ ಶಕ್ತಿಯಿಂದಲೇ ಇದೆಲ್ಲವನ್ನೂ ಮಾಡುತ್ತಾನೆ. ಇದನ್ನು ಅರಿಯದ ಜ್ಞಾನಹೀನರು ನಶಿಸುತ್ತಾರೆ. ಎಲೈ ಜ್ಞಾನಿಯೇ ಕೇಳು ಶ್ರದ್ಧೆಯ ಸತ್ಯವನ್ನು ನಿನಗೆ ಉಪದೇಶಿಸುತ್ತೇನೆ.

*(ಉಪನಿಷತ್ತುಗಳು ಮತ್ತು ಮಹಾಭಾರತದಲ್ಲಿ ಇದೇ ತತ್ತ್ವವನ್ನು ವಿಸ್ತಾರವಾಗಿ ಪ್ರತಿಪಾದಿಸಲಾಗಿದೆ)*

ಅಹಮೇವ ಸ್ವಯಮಿದಂ ವದಾಮಿ
ಜುಷ್ಟಂ ದೇವೇಭಿರುತ ಮಾನುಷೇಭಿಃ |
ಯಂ ಕಾಮಯೇ ತಂ ತಮುಗ್ರಂ ಕೃಣೋಮಿ
ತಂ ಬ್ರಹ್ಮಾಣಂ ತಮೃಷಿಂ ತಂ ಸುಮೇಧಾಮ್ || ||೫||

ದೇವತೆಗಳಿಂದಲೂ, ಮಾನವರಿಂದಲೂ, ಅನುಸರಿಸಬೇಕಾದ ಈ ತತ್ತ್ವವನ್ನು ನಾನೇ ಉಪದೇಶಿಸುತ್ತೇನೆ. "ನಾನು ಯಾರನ್ನು ಪ್ರೀತಿಸುತ್ತೇನೆಯೋ ಅವರನ್ನು ಬಲಿಷ್ಠನನ್ನಾಗಿ, ಬ್ರಹ್ಮನನ್ನಾಗಿ, ಋಷಿಯನ್ನಾಗಿ, ಪ್ರಾಜ್ಞನನ್ನಾಗಿ ಮಾಡುತ್ತೇನೆ."

ಅಹಂ ರುದ್ರಾಯ ಧನುರಾತನೋಮಿ
ಬ್ರಹ್ಮದ್ವಿಷೇ ಶರವೇ ಹಂತ ವಾ ಉ |
ಅಹಂ ಜನಾಯ ಸಮದಂ ಕೃಣೋಮಿ
ಅಹಂ ದ್ಯಾವಾಪೃಥಿವೀ ಆವಿವೇಶ || ||೬||

ಬ್ರಾಹ್ಮಣರನ್ನು ದ್ವೇಷಿಸುವ ಅಸುರರ ನಾಶಕ್ಕಾಗಿ ನಾನು ರುದ್ರನ ಬಿಲ್ಲಿಗೆ ಹೆದೆಯನ್ನು ಕಟ್ಟುತ್ತೇನೆ ಮತ್ತು ಜನರ ರಕ್ಷಣೆಗಾಗಿ ಯುದ್ಧವನ್ನು ಮಾಡುತ್ತೇನೆ. ನಾನು ಸ್ವರ್ಗವನ್ನೂ ಭೂಲೋಕವನ್ನೂ (ಅಂತರ್ಯಾಮಿ ರೂಪದಿಂದ) ಪ್ರವೇಶಿಸಿರುತ್ತೇನೆ.

*(ಈ ತತ್ತ್ವ ವಿಸ್ತೃತವಾಗಿ ಹಲವಾರು ಪುರಾಣಗಳಲ್ಲಿ ಬೆಳೆದಿರುವುದನ್ನು ಕಾಣಬಹುದಾಗಿದೆ).*

ಅಹಂ ಸುವೇ ಪಿತರಮಸ್ಯ ಮೂರ್ಧನ್
ಮಮ ಯೋನಿರಪ್ಸ್ವ ಅಂತಸ್ಸಮುದ್ರೇ |
ತತೋ ವಿತಿಷ್ಠೇ ಭುವನಾನು ವಿಶ್ವೋ
ತಾಮೂಂ ದ್ಯಾಂ ವರ್ಷ್ಮಣೋಪಸಕ್ಸ್ಪೃಶಾಮಿ || ||೭||

[illegible] ಲೋಕಗಳನ್ನು ವ್ಯಾಪಿಸಿರುತ್ತೇನೆ.

*( ಋಗ್ವೇದದ ಪುರುಷಸೂಕ್ತ, ಭಾಗವತ ಮಹಾಪುರಾಣ, ವರಾಹಪುರಾಣ ಮತ್ತು ಇತರ ಹಲವಾರು ಶಾಸ್ತ್ರಗಳಲ್ಲಿ ಈ ತತ್ತ್ವವು ಬಹು ವಿಸ್ತೃತವಾಗಿದೆ. ನಾಲ್ಕು ವೇದಗಳಲ್ಲಿ ಉಕ್ತವಾಗಿರುವ ನಾಲ್ಕು ಮಹಾವಾಕ್ಯಗಳೂ ಈ ತತ್ತ್ವವನ್ನು ಬಗೆ ಬಗೆಯಾಗಿ ನಿರೂಪಿಸುವುದನ್ನು ಕಾಣುತ್ತೇವೆ ).*

ಅಹಮೇವ ವಾತ ಇವ ಪ್ರವಾಮಿ
ಆರಭಮಾಣಾ ಭುವನಾನಿ ವಿಶ್ವಾ |
ಪರೋ ದಿವಾ ಪರ ಏನಾ ಪೃಥಿವ್ಯೈ
ತಾವತೀ ಮಹಿನಾ ಸಂಬಭೂವ || ||೮||

ಸಮಸ್ತಲೋಕಗಳನ್ನೂ ಕಾರಣರೂಪದಿಂದ ಪ್ರಾರಂಭಿಸುವವರಾಗಿ ಆ ಸಮಯದಲ್ಲಿ ವಾಯುವಿನಂತೆ ಅನ್ಯ ಪ್ರೇರಣೆಯಿಲ್ಲದೆ ಸ್ವಯಂ ಚಲಿಸುತ್ತೇನೆ. ನಾನು ದ್ಯುಲೋಕವನ್ನೂ ಪೃಥಿವಿಯನ್ನೂ ಮೀರಿರುತ್ತೇನೆ ನನ್ನ ಮಹಿಮೆ ಹೀಗಿರುವುದು.

## ಪುರಾಣಗಳು .

ದೇವೀ ಸೂಕ್ತದ ವಿವರಣೆಯು 'ದೇವೀಮಾಹಾತ್ಮ್ಯ'ಅಥವ 'ದುರ್ಗಾಸಪ್ತ ಶತೀ' ವಿಭಾಗದಲ್ಲಿ ವಿವರವಾಗಿ ಬೆಳೆದಿದೆ. ಒಂದೊಂದು ಸೂತ್ರದ ವಿವರಣೆಯನ್ನು ಸಪ್ತಮಾತೃಕೆಯರ ಅವತಾರದಲ್ಲಿ ಕಾಣುತ್ತೇವೆ. ಸಪ್ತಮಾತೃಕೆಯ ಮಹಾತ್ಮೆಯ ಬೆಳೆವಣಿಗೆ ಪ್ರಾರಂಭ ದೇವೀ ಸೂಕ್ತದಿಂದ ಪ್ರಾರಂಭವಾಗುತ್ತದೆ.

ಹಲವಾರು ಪುರಾಣಗಳಲ್ಲಿ ದೇವೀಮಾಹಾತ್ಮ್ಯೆಯನ್ನು ಬಹಳ ವಿಸ್ತೃತವಾಗಿ ವಿವರಿಸಲಾಗಿದೆ. ಮಾರ್ಕಂಡೆಯ ಪುರಾಣದ 78 ರಿಂದ 90ನೇ ಅಧ್ಯಾಯದವರೆಗಿನ ಹದಿಮೂರು ಅಧ್ಯಾಯಗಳು ದೇವೀಮಾಹಾತ್ಮ್ಯೆಯನ್ನು 'ದೇವೀಸಪ್ತಶತೀ' ಎಂದು ಉಲ್ಲೇಖಿಸಿ ಅದನ್ನು ದಿನವೂ ಪಾರಾಯಣ ಮಾಡುವವರೂ ಬಹಳ ಭಕ್ತರಿದ್ದಾರೆ. ದೇಶದ ಎಲ್ಲೆಡೆ ನವರಾತ್ರಿಯ ಕಾಲದಲ್ಲಿ 'ಚಂಡೀಪಾರಾಯಣ ' ಬಹು ಮುಖ್ಯವಾದುದು, ಮತ್ತು ಫಲಪ್ರದವಾದುದು ಎಂದು ಭಾರತಾದ್ಯಂತ ಇದರ ಜಪ ನಡೆಯುತ್ತದೆ.

ಶರನ್ನವರಾತ್ರಿಯಲ್ಲಿ, ಶೃಂಗೇರಿಯಲ್ಲಿ ಶ್ರೀಶಾರದೆಗೆ ಸಪ್ತಮಾತೃಕೆಯರಾದ ವೈಷ್ಣವೀ, ಬ್ರಾಹ್ಮೀ, ಇಂದ್ರಾಣೀ ಮೊದಲಾದ ಅಲಂಕಾರಗಳನ್ನು ಬಹು ವಿಶೇಷವಾಗಿ ಮಾಡಿ ಬಹು ಭಕ್ತಿಯಿಂದ ಪೂಜಿಸುವುದು ಬಹು ಹಿಂದಿನ ಕಾಲದಿಂದಲೂ ನಡೆದು ಬಂದ ಪದ್ಧತಿಯಾಗಿದೆ.

## ಶೃಂಗೇರಿ ಶ್ರೀ ಶಾರದಾದೇವಿಗೆ

## ವೃಷಭವಾಹನಅಲಂಕಾರ 'ಮಾಹೇಶ್ವರೀ '



ಶಾರ್ದೂಲಚರ್ಮ ಪರಿವೀಕ್ಷ್ಯ ಭವಾಂಗಸಂಸ್ಥಂ
ಭೀತಃ ಪಲಾಯ್ಯ ತವ ಸನ್ನಿಧಿಮಾಗತಃ ಕಿಮ್ |
ಉಕ್ಷಾಧಿಪಃ ಸರಸಿಜಾಸನಧರ್ಮಪತ್ನಿ
ಬ್ರಹ್ಮಾದ್ಯಸಂಶಯನಿಮಗ್ನಮತೇರ್ಮಮಾಶು ||

ದೇವೀ, ಬ್ರಹ್ಮನ ರಾಣಿ, ಪರಮೇಶ್ವರನು ಧರಿಸಿದ್ದ ವ್ಯಾಘ್ರಾಂಭರವನ್ನು ನೋಡಿ ಭಯದಿಂದ ವೃಷಭವು ನಿನ್ನ ಬಳಿ ಓಡಿ ಬಂದಿದೆಯಾ ? ನಿಧಾನಿಸದೆ ನನ್ನ ಸಂದೇಹವನ್ನು ನಿವಾರಿಸು.

---

* (ಜಗದ್ಗುರು ಶ್ರೀ ಸಚ್ಚಿದಾನಂದ ಶಿವಾಭಿನವ ನೃಸಿಂಹ ಭಾರತೀ ಮಹಾಸ್ವಾಮಿಗಳವರು ರಚಿಸಿದ ಶಾರದಾಂಬಾ ಸ್ತೋತ್ರದಿಂದ)



ಕಿಂ ವರ್ಣಯಾಮಿ ತವ ಸುಂದರತಾಂ ಮನುಷ್ಯೋ |
ಯತ್ಸುಂದರತ್ವಮಭಿವೀಕ್ಷ್ಯ ಮಯೂರಪಕ್ಷೀ |
ಹಿತ್ವಾ ವಿರೂಪ ಇತಿ ಷಣ್ಮುಖಮಾಶು ಮಾತ |
ವಾಸಂ ಕರೋತಿ ತವ ಪಾದಸರೋಜಮೂಲೇ ||

ದೇವಿ, ನಿನ್ನ ಸೌಂದರ್ಯವನ್ನು ಮನುಷ್ಯನಾದ ನಾನು ಹೇಗೆ ವರ್ಣಿಸಲಿ ? ನಿನ್ನ ಅಪೂರ್ವ ಸೌಂದರ್ಯದಿಂದ ಮಾರು ಹೋಗಿ ಷಣ್ಮುಖನು ಸೌಂದರ್ಯವಂತನಲ್ಲವೆಂದು ನಿನ್ನ ಪಾದದ ಬಳಿ ಮಯೂರವು ಬಂದು ಆಶ್ರಯ ಪಡೆದಿರುವುದೇ ?

## ಶೃಂಗೇರಿ ಶ್ರೀ ಶಾರದಾ ದೇವಿಗೆ
## ಗರುಡವಾಹನ ಅಲಂಕಾರ (ವೈಷ್ಣವೀ)



ಆದ್ಯಾ ಮತ್ಸ್ಯಮಯೀ ತನುರ್ಮಧುರಿಪೋಃ ಕೌರ್ಮದ್ವಿತೀಯಂ ವಪು-
ಸ್ತದ್ಯುಗ್ಮಂ ತ್ವಮಿಹಾಂಬ ನೇತ್ರಪದಯೋ ರ್ವ್ಯಾಜೇನ ಧತ್ಸೇಯತಃ |
ತಸ್ಮಾಚ್ಚಕ್ರಯುಗಂ ತವೋರಸಿ ಕುಚವ್ಯಾಜೇನ ಭಾತ್ಯಂಬಿಕೇ
ತಸ್ಮಾದೇವ ಖಗೇಶ್ವರಶ್ಚ ಸತತಂ ತ್ವಾಂ ಸೇವತೇ ಮೋದತಃ ||

ದೇವಿ, ನಿನ್ನ ಅಕ್ಷಿಗಳೂ, ಪಾದಗಳೂ, ಮಹಾ ವಿಷ್ಣುವಿನ ಮತ್ಸ್ಯ ಮತ್ತು ಕೂರ್ಮ ಅವತಾರಗಳನ್ನು ಸೂಚಿಸುತ್ತವೆ. ನಿನ್ನ ಸ್ತನಗಳು ಪ್ರಕಾಶಮಾನವಾದ ಚಕ್ರದಂತಿವೆ. ಅದರಿಂದ ಗರುಡನು ನಿನ್ನ ಸೇವೆಗಾಗಿ ಸದಾ ಕಾದಿಹನು.



ವಿಹಂಗಂ ಕುರಂಗಂ ತುರಂಗಂ ಚ ವಾಹಂ
ವಿಧಾಯಶುಗಂ ಭ್ರಾಂತಿಮಾಸಾದ್ಯಕಿಂ ತ್ವಮ್।
ಗಜಂ ಮಂದಗಂ ವಾಹಮಧ್ಯಾತನೋಷಿ
ಪ್ರಣಮ್ರಸ್ಯ ಮೇ ಬ್ರೂಹಿ ವಾಚಾಮಧೀಶೇ॥

ವಾಗ್ದೇವಿಯೇ, ನಿಧಾನವಾಗಿ ಚಲಿಸುವ ಗಜರಾಜನು, ಬೇಡವೆಂದು ಗರುಡ, ಜಿಂಕೆ,ಅಶ್ವಗಳನ್ನು ವಾಹನವಾಗಿ ಸ್ವೀಕರಿಸಿದೆಯಾ ?  ನಿನ್ನ ಅಂತರಂಗದ ತತ್ತ್ವವನ್ನು ಹೇಳಲಾರೆಯಾ ?

ಶೃಂಗೇರಿ ಶ್ರೀ ಶಾರದಾ ದೇವಿಗೆ

ಸಿಂಹವಾಹನಅಲಂಕಾರ (ಚಾಮುಂಡಾ)



ಭಕ್ತಾಜ್ಞಾನಮಹೇಭಾ
ಮದ್ವಾಹನಸಂನಿರೀಕ್ಷಣಾದೇವ |
ನಿರ್ಯಾಂತ್ವಿತಿ ಸಹಸಾ ಕಿಂ
ಸಿಂಹಂ ವಾಹಂ ಕರೋಷಿ ಮಾತಸ್ತ್ವಮ್ ||

ದೇವೀ, ನಿನ್ನ ಭಕ್ತರಲ್ಲಿ ನೆಲೆಸಿರುವ ಕತ್ತಲೆ ಎಂಬ ಬೃಹದಾಕಾರದ ಆನೆಯನ್ನು ನಿರ್ಮೂಲ ಮಾಡಲು ಸಿಂಹವನ್ನು ನಿನ್ನ ವಾಹನವನ್ನಾಗಿ ಸ್ವೀಕರಿಸಿರುವೆಯಾ?

ಶ್ರೀ ಶಾರದಾ ದೇವಾಲಯದ ಪ್ರಮುಖ ದ್ವಾರದಲ್ಲಿ ರಚಿಸಿರುವ ಬಾಗಿಲಿಗೆ ರಾಜರಾಜೇಶ್ವರಿಯ ಜೊತೆಗೆ ಸಪ್ತಮಾತೃಕೆಯರ ಶಿಲ್ಪವನ್ನು ಕೆತ್ತಿರುವುದನ್ನು ಕಾಣಬಹುದಾಗಿದೆ. ಶ್ರೀ ಶೃಂಗಗಿರಿಯ ನಾಲ್ಕು ದಿಸೆಗಳಲ್ಲಿಯೂ ನಾಲ್ಕು ರಕ್ಷಣಾ ಕೋಟೆಗಳಂತಿರುವ ದೇವಾಲಯಗಳಿವೆ. ದಕ್ಷಿಣದಲ್ಲಿ ದುರ್ಗೆಯ ದೇವಾಲಯವಿದೆ. ಅದೇ ದಿಕ್ಕಿಗೆ ಹೊಂದುವಂತೆ ಶ್ರೀ ವಿದ್ಯಾರಣ್ಯರ ಅಧಿಷ್ಠಾನದ ದಕ್ಷಿಣದ ದಿಸೆಯಲ್ಲಿ ಶ್ರೀ ಸಪ್ತಮಾತೃಕಾಪೀಠವನ್ನು ಕಾಣಬಹುದಾಗಿದೆ.

ಶ್ರೀ ಶಂಕರರ ಜನ್ಮ ಸ್ಥಳವಾದ ಕಾಲಟಿಯಲ್ಲಿ ನಿರ್ಮಿಸಿರುವ ಶ್ರೀ ಶಾರದಾ ದೇವಾಲಯದ ಅಷ್ಟಕೋನಾಕೃತಿಯರಚನೆಯಲ್ಲಿ ಮುಖದ್ವಾರದಲ್ಲಿ ಶಾರದೆಯ ದರ್ಶನ ಮಾಡಿದರೆ ಉಳಿದ ದಿಸೆಗಳಲ್ಲಿ ಕ್ರಮವಾಗಿ ಸಪ್ತಮಾತೃಕೆಯರ ದರ್ಶನ ದೊರೆಯುವಂತೆ ಶಿಲ್ಪಗಳನ್ನು ಕೆತ್ತಲಾಗಿದೆ.

ಶೃಂಗೇರಿಯಲ್ಲಿರುವ ಬೆಳ್ಳಿಯ ರಥದಲ್ಲಿಯೂ ಈಗ ತಾನೇ ದೇವಿಗೆ ಸಮರ್ಪಣೆಯಾದ ಚಿನ್ನದ ರಥದಲ್ಲಿಯೂ ಮುಖ ಭಾಗದಲ್ಲಿ ಶಾರದೆಯ ದರ್ಶನ ದೊರೆತರೆ ಉಳಿದ ಏಳು ದಿಸೆಗಳಲ್ಲಿಯೂ ಕ್ರಮವಾಗಿ ಸಪ್ತಮಾತೃಕೆಯರ ದರ್ಶನ ದೊರೆಯುವಂತೆ ಅವರ ವಿಗ್ರಹಗಳನ್ನು ಕೆತ್ತಿರುವುದನ್ನು ಕಾಣಬಹುದಾಗಿದೆ. ಹೀಗೆ ಶಾರದೆಯು ಶೃಂಗೇರಿಯ ಅಗ್ರ ದೇವತೆ ಮಾತ್ರವಲ್ಲ, ಆಕೆ ಸರ್ವ ಶಕ್ತಿಯ ಸ್ವರೂಪಿಣೀ, ಆಕೆಯೇ ದುರ್ಗೀ, ಆಕೆಯೇ ಪಾರ್ವತೀ, ಆಕೆಯೇ ಸರಸ್ವತೀ, ಆಕೆಯೇ ಮಹಾಲಕ್ಷ್ಮೀ ಎಂದು ದೇವಿಯನ್ನು ಹಲವಾರು ರೂಪಗಳಲ್ಲಿ ಕಾಣುತ್ತೇವೆ.

ಭಾರತದ ಉತ್ತರದಲ್ಲಿ ದೇವಿಯನ್ನು ಶಾರದೆಯೆಂದು ಪೂಜಿಸಿದರೆ, ಪೂರ್ವದಲ್ಲಿ ದುರ್ಗೆಯೆಂದು ಪೂಜಿಸುತ್ತಾರೆ. ದಕ್ಷಿಣದಲ್ಲಿ ಮಾರೀ ಎಂದು ಪೂಜಿಸಿದರೆ, ಪಶ್ಚಿಮದಲ್ಲಿ ಕಾಳೀ ಎಂದು ಪೂಜಿಸುತ್ತಾರೆ. ಹೀಗೆ ದೇಶದ ವಿವಿದೆಡೆ ತಮತಮಗೆ ಒಪ್ಪುವ ಹೆಸರಿನಿಂದ ಪೂಜಿಸಿದರೂ ದೇವಿಯು ಒಬ್ಬಳೇ ಎಂದು ಒಂದೇ ಮಂತ್ರದಿಂದ ದೇವಿಯ ಸ್ಮರಣೆ ಮಾಡುವುದು, ಪಾರಾಯಣ ಮಾಡುವುದು ಇತ್ಯಾದಿಗಳ ರೂಪದಲ್ಲಿ ಅಖಂಡ ಭಾರತದ ಏಕತೆಯನ್ನೂ ಕಾಣುತ್ತೇವೆ. ಹೀಗೆ ದೇವಿ ಜ್ಞಾನಮಯಿ, ಶಕ್ತಿಮಯಿ, ಮುಕ್ತಿಮಯಿ ಮಾತ್ರವಲ್ಲ , ಈ ದೇಶವನ್ನು ಒಂದು ಗೂಡಿಸಿ ಇರಿಸುವ ಐಕ್ಯಮಯಿಯೂ ಆಗಿದ್ದಾಳೆ.

ದಕ್ಷಿಣಭಾರತದ ಎಲ್ಲಾ ಶಿವಾಲಯಗಳಲ್ಲಿಯೂ, ವಿಷ್ಣುದೇವಾಲಯಗಳಲ್ಲಿಯೂ ಸಾಧಾರಣವಾಗಿ ಈ ಸಪ್ತಮಾತೃಕೆಯರ ವಿಗ್ರಹಗಳನ್ನು ಒಂದಲ್ಲ ಒಂದು ರೂಪದಲ್ಲಿ ಗುರುತಿಸಬಹುದಾಗಿದೆ.



ಅಧ್ಯಾಯ ೬

## ದೇವೀಚತುಃಷಷ್ಟ್ಯುಪಚಾರಪೂಜಾ

ಆಚಾರ್ಯ ಶ್ರೀಶಂಕರಭಗವತ್ಪಾದರು ರಚಿಸಿರುವ ದೇವಿಸ್ತುತಿಗಳಲ್ಲಿ ಸಾಧಾರಣ ಜನರಿಗೆ ಅನುಕೂಲವಾಗುವಂತೆಯೂ ಪೂಜಾ ವೇಳೆಯು ದೀರ್ಘವಾಗಿದ್ದು ದೇವಿಯತ್ತ ಮನಸ್ಸನ್ನು ಹೆಚ್ಚು ಹೊತ್ತು ಕೇಂದ್ರೀಕರಿಸಲು ಸಹಾಯವಾಗುವಂತೆ ಈ ಕೃತಿಯನ್ನು ರಚಿಸಿರುತ್ತಾರೆ.

ಪಂಚಾಯತನ ಪೂಜೆಯ ಮುಖಾಂತರ ಅದ್ವೈತಾನುಭವಕ್ಕೆ ಭಕ್ತರನ್ನು ಕೊಂಡೊಯ್ಯುತ್ತಾರೆ. ಆದಿಶಕ್ತಿಯಾದ ದೇವಿಯು ಆಯಾ ಸಮಯಕ್ಕೆ ತಕ್ಕಂತೆ ಹೇಗೆ ವಿವಿಧ ರೂಪಗಳಲ್ಲಿ ಪ್ರತ್ಯಕ್ಷಗೊಂಡು ಲೋಕವನ್ನು ಉದ್ಧರಿಸಿದಳೆಂಬು ದನ್ನು ನಮ್ಮ ಶಾಸ್ತ್ರಗ್ರಂಥಗಳ ಮುಖಾಂತರ ಅರಿಯುತ್ತೇವೆ. ಹಾಗೆ ದೇವಿಯ ಕೀರ್ತಿಯನ್ನು ಅರಿತ ಭಕ್ತರಿಗೆ ತಮ್ಮ ಹೃದಯಾಂತರಾಳದಿಂದ ಹೊರಬರುವ ಭಕ್ತಿ ಭಾವವನ್ನು ಸಮರ್ಪಿಸಲು ಅನುಕೂಲವಾಗುವಂತೆ ಈ ಸುಧೀರ್ಘವಾದ 'ಉಪಚಾರ ಪೂಜಾ ಸ್ತೋತ್ರವನ್ನು ರಚಿಸಿರುತ್ತಾರೆ. ದೇವಿಯಸ್ತೋತ್ರದೊಂದಿಗೆ ಬೆರೆತಿರುವುದು ಪರಮ ಭಕ್ತಿ, ಅದು ಬೆಳೆದು ಪರಾಭಕ್ತಿಯಾಗಬೇಕೆಂಬುದೇ ಆಚಾರ್ಯರ ಬಯಕೆ. ಅದಕ್ಕಾಗಿಯೇ ಹಲವಾರು ಉಪಚಾರಗಳನ್ನು ಒಂದುಗೂಡಿಸಿ ಒಂದು ಅತ್ಯುತ್ಕೃಷ್ಟ ಭಕ್ತಿ ಮಾಲೆಯಾಗಿ ರಚಿಸಿ ಭಕ್ತರ ಕೈಗಿತ್ತಿದ್ದಾರೆ. ಅದನ್ನು ದೇವಿಗೆ ಭಕ್ತಿಯಿಂದ ಸಮರ್ಪಿಸಿ ಕೃತಕೃತ್ಯರಾಗಬೇಕಾದುದು ಭಕ್ತರಿಗೆ ದೊರೆತಿರುವ ಪುಣ್ಯ. ಅಂತಹ ಧಾರೆ ಧಾರೆಯಾಗಿ ಹೊರ ಬರುವ ಹೃದಯಾಂತರಾಳದ ಭಾವದಿಂದ ದೇವಿಗೆ ವಂದಿಸುವ ಭಾಗ್ಯವನ್ನು ಆಚಾರ್ಯರು ಒದಗಿಸಿರುತ್ತಾರೆ.

ಬೆಳಿಗ್ಗೆ ಉಷಃಕಾಲದಲ್ಲಿ ಪ್ರಾರಂಭವಾಗುವ ಸುಪ್ರಭಾತ ಉಪಚಾರದಿಂದ ಪ್ರಾರಂಭವಾಗಿ ರಾತ್ರಿ ವಿಶ್ರಾಂತಿಯ ವೇಳೆಯವರೆವಿಗಿನ ಸಕಲ ಉಪಚಾರಗಳನ್ನೂ ವಿವರಿಸಿರುತ್ತಾರೆ. ಅಂತಹ ಉಪಚಾರಮಾಡುವ ಪೂಜೆ ಮಾಡುವುದು ಭಕ್ತರಿಗೆ ದೊರೆಯುವ ಮಹಾಭಾಗ್ಯ, ಅಂತಹ ಭಾಗ್ಯ ನಮ್ಮದಾಗಲೀ, ದೇವೀ ಕೃಪೆಗೆ ಪಾತ್ರರಾಗೋಣ. ನಮ್ಮ ಬಹು ಜನ್ಮಗಳ ಪೂಜಾಫಲದ ಬಲದಿಂದಾಗಿ ಈ ಮಹಾ ಫಲದೊರೆತಿದೆ. ಇಂತಹ ಫಲ ನಮ್ಮದಾಗಲಿ, ದೇವೀ ಕೃಪೆಗೆ ಪಾತ್ರರಾಗಿ ಜನ್ಮ ಸಾರ್ಥಕ ಪಡಿಸಿಕೊಳ್ಳೋಣ.

ಭಕ್ತಿಭಾವದಿಂದ ಏಕಾಗ್ರತೆಯಿಂದ ದೇವಿಯನ್ನು ಸ್ಮರಿಸುವ ಭಾಗ್ಯವನ್ನು ಅನುಗ್ರಹಿಸು ಎಂದು ಪ್ರಾರ್ಥಿಸೋಣ.

ಶ್ರೀ

# ದೇವೀಚತುಃಷಷ್ಟ್ಯುಪಚಾರ ಪೂಜಾ ಸ್ತೋತ್ರ ಮಾಲಿಕಾ

## ೧. ಸುಪ್ರಭಾತ ಉಪಚಾರ

ಉಷಸಿ ಮಾಗಧಮಂಗಲಗಾಯನೈರ್ಝಟಿತಿ
ಜಾಗೃಹಿ ಜಾಗೃಹಿ ಜಾಗೃಹಿ ಜಾಗೃಹಿ |
ಅತಿಕೃಪಾರ್ದ್ರಕಟಾಕ್ಷನಿರೀಕ್ಷಣೈಃ
ಜಗದಿದಂ ಜಗದಂಬ ಸುಖೀಕುರು || ||೧||

ಹೇ ಜಗನ್ಮಾತೆ, ದೇವಿ, ಸರ್ವಮಂಗಳೆ, ಉಷಃಕಾಲದಲ್ಲಿ ಬ್ರಾಹ್ಮೀ ಮುಹೂರ್ತದಲ್ಲಿ ಸ್ತುತಿಪಾಠಕರು ನಿನ್ನನ್ನೆಬ್ಬಿಸಲು ನಿನ್ನ ಸ್ತುತಿಮಾಡುತ್ತಿರುವರು. ತಾಯೇ, ಏಳು, ಏದ್ದೇಳು, ಅತ್ಯಂತ ಕರುಣೆಯಿಂದ ಕೂಡಿದ ನಿನ್ನ ಕುಡಿಗಣ್ಣಿನ ನೋಟದಿಂದ ಜಗತ್ತಿಗೆ ಸುಖ ತರಲು ಜಾಗೃತಳಾಗು ತಾಯಿ, ಏಳು ಎದ್ದೇಳು.

## ೨. ಆಹ್ವಾನ ಉಪಚಾರ

ಕನಕಮಯವಿತರ್ದಿಶೋಭಮಾನಂ
ದಿಶ ದಿಶ ಪೂರ್ಣಸುವರ್ಣಕುಂಭಯುಕ್ತಂ |
ಮಣಿಮಯಮಂಟಪಮಧ್ಯಮೇಹಿ ಮಾತಃ
ಮಯಿ ಕೃಪಯಾಶು ಸಮರ್ಚನಂ ಗ್ರಹೀತುಮ್ || ||೨||

ಹೇ ವಿಶ್ವವಂದ್ಯೆ, ಸುವರ್ಣಮಯವಾದ ಪೀಠದಿಂದ ಶೋಭಾಯಮಾನವಾದ ದಶದಿಕ್ಕುಗಳಲ್ಲಿಯೂ ಸುವರ್ಣಕಳಶಗಳಿಂದ ಶೋಭಾಯಮಾನವಾದ ಮಣಿಮಯವಾದ ಮಂಟಪದ ಮಧ್ಯದಲ್ಲಿ ಮಂಡಿಸಿ ನಮ್ಮ ಪೂಜೆಯನ್ನು ಸ್ವೀಕರಿಸಲು ಕೃಪಾಮಯಿಯಾದ ನೀನು ದಯಮಾಡಿಸು.

## ೩. ಪತಾಕಾ ಉಪಚಾರ

ಕನಕಕಲಶಶೋಭಮಾನಶೀರ್ಷಂ
ಜಲಧರಲಂಬಿಸಮುಲ್ಲ, ಸತ್ಪತಾಕಮ್ |
ಭಗವತಿ ತವ ಸನ್ನಿವಾಸಹೇತೋ
ರ್ಮಣಿಮಯಮಂದಿರಮೇ ತದರ್ಪಯಾಮಿ || ||೩||

ಹೇ ಜಗನ್ಮಾತೆ, ಈ ಮಂಟಪದಲ್ಲಿ ಅಲಂಕರಿಸಿರುವ ಚಿನ್ನದ ಕಲಶಗಳಿಗೆ ಅಲಂಕರಿಸಿರುವ ಪತಾಕೆಗಳಾದರೋ ಮೋಡಗಳನ್ನು ಮುಟ್ಟುತ್ತಿವೆ. ಅವು ಗಗನದಲ್ಲಿ ತಮ್ಮ ಕೀರ್ತಿಯನ್ನು ಪಸರಿಸಿವೆ. ಹೇ ಭಗವತಿ ನಿನ್ನ ನಿವಾಸಕ್ಕಾಗಿ ರಚಿಸಿರುವ ಮಣಿಮಯಮಂದಿರವನ್ನು ನಿನಗೆ ಸಮರ್ಪಿಸುತ್ತಿದ್ದೇನೆ.

೪. ಉತ್ಸವೋಪಚಾರ

ತಪನೀಯಮಯೀ ಸುತೂಲಿಕಾ
ಕಮನೀಯಾ ಮೃದುಲೋತ್ತರಚ್ಛದಾ |
ನವರತ್ನವಿಭೂಷಿತಾ ಮಯಾ
ಶಿಬಿಕೇಯಂ ಜಗದಂಬ ತೇಽರ್ಪಿತಾ || ||೪||

ಹೇ ಜಗದಂಬೆ, ಸುವರ್ಣಮಯವಾದ, ನವರತ್ನಗಳಿಂದ ಅಲಂಕೃತವಾದ ಈ ಪಲ್ಲಕ್ಕಿಯನ್ನು ಮೃದುವಾದ ಸುಪ್ಪತ್ತಿಕೆ ಹಾಗೂ ಮೃದುವಾದ ಉತ್ತರೀಯದಿಂದ ಮನೋಹರವಾಗಿ ರಚಿಸಲಾಗಿದೆ. ದೇವಿ ಇದನ್ನು ನಿನಗೆ ಸಮರ್ಪಿಸುತ್ತಿದ್ದೇನೆ.

೫. ಆಹ್ವಾನ ಉಪಚಾರ

ಕನಕಮಯವಿತರ್ದಿಸ್ಥಾಪಿತೇ ತೂಲಿಕಾಢ್ಯೇ |
ವಿವಿಧಕುಸುಮಕೀರ್ಣೇ ಕೋಟಿಬಾಲಾರ್ಕವರ್ಣೇ ||
ಭಗವತಿ ರಮಣೀಯೇ ರತ್ನಸಿಂಹಾಸನೇಽಸ್ಮಿನ್
ಉಪವಿಶ ಪದಯುಗ್ಮಂ ಹೇಮಪೀಠೇ ನಿಧಾಯ || ||೫||

ಹೇ ಭಗವತೀ, ಈ ರತ್ನಸಿಂಹಾಸನದಲ್ಲಿ ಸುವರ್ಣಮಯವಾದ ಪೀಠವಿದೆ. ಸುಂದರವಾದ, ಮೃದುವಾದ ಸುಪ್ಪತ್ತಿಗೆಯ ಮೇಲೆ ಬಗೆಬಗೆಯ ಸುಂದರವಾದ ಸುಗಂಧಭರಿತ ಪುಷ್ಪಗಳಿಂದ ಅಂದಗೊಳಿಸಲಾಗಿದೆ. ಕೋಟಿಸೂರ್ಯಪ್ರಕಾಶಳಾದ ನೀನು ನಿನ್ನ ಪಾದಯುಗ್ಮಗಳಿಂದ ಸಿಂಹಾಸನವನ್ನು ಪವಿತ್ರಗೊಳಿಸು.

೬. ಮಂಟಪ ಉಪಚಾರ

ಮಣಿಮೌಕ್ತಿಕನಿರ್ಮಿತಂ ಮಹಾಂತಂ |
ಕನಕಸ್ತಂಭಚತುಷ್ಟಯೇನ ಯುಕ್ತಮ್ ||
ಕಮನೀಯತಮಂ ಭವಾನಿ ತುಭ್ಯಂ |
ನವಮುಲ್ಲೋಚಮಹಂ ಸಮರ್ಪಯಾಮಿ || ||೬||

ಹೇ ಭವಾನಿ, ಉತ್ತಮವಾದ ಮಣಿಗಳಿಂದಲೂ, ಮುತ್ತುಗಳಿಂದಲೂ ಅಲಂಕೃತವಾಗಿರುವ ಮಂಟಪದ ನಾಲ್ಕು ಚಿನ್ನದ ಕಂಬಗಳನ್ನೂ ರಮಣೀಯವಾಗಿ

ದೂರ್ವಯಾ ಸರಸಿಜಾನ್ವಿತವಿಷ್ಣು-
ಕ್ರಾಂತಯಾ ಚ ಸಹಿತಂ ಕುಸುಮಾಢ್ಯಮ್ ||
ಪದ್ಮಯುಗ್ಮಸದೃಶೇ ಪದಯುಗ್ಮೇ |
ಪಾದ್ಯಮೇತದುರರೀಕುರು ಮಾತಃ || ||೭||

ಹೇ ಕುಸುಮಪ್ರಿಯೆ, ಮೃದುವಾದ ನಿನ್ನ ಸುಂದರವಾದ ಪಾದಗಳನ್ನು ಇರಿಸಲು, ದೂರ್ವಾಯುಗ್ಮ, ಕಮಲ, ವಿಷ್ಣುಕ್ರಾಂತಪತ್ರ ಮೊದಲಾದ ಅತಿ ಉತ್ತಮವಾದ ಪುಷ್ಪಗಳಿಂದ ರಂಜಿಸಲಾಗಿದೆ. ಆ ಸಿಂಹಾಸನವನ್ನು ಅಲಂಕರಿಸಿ ನಾವು ನೀಡುವ ಪಾದೋದಕವನ್ನು ಸ್ವೀಕರಿಸಿ ನಮ್ಮನ್ನು ಉದ್ಧರಿಸು.

### ೮. ಅರ್ಘ್ಯೋಪಚಾರ

ಗಂಧಪುಷ್ಪಯವಸರ್ಷಪದೂರ್ವಾ -
ಸಂಯುತಂ ತಿಲಕುಶಾಕ್ಷತಮಿಶ್ರಮ್
ಹೇಮಪಾತ್ರನಿಹಿತಂ ಸಹ ರತ್ನೈ |
ರರ್ಘ್ಯಮೇತದುರರೀಕುರು ಮಾತಃ || ||೮||

ಹೇ ಸರ್ವಾಭರಣಭೂಷಿತೆ, ಗಂಧ, ಪುಷ್ಪ, ಯವ, ಬಿಳಿ ಸಾಸುವೆ, ದೂರ್ವಾಯುಗ್ಮ ಮೊದಲಾದುವುಗಳಿಂದ ಕೂಡಿದ ಎಳ್ಳು, ದರ್ಭೆ, ಅಕ್ಷತೆಗಳಿಂದ ಮಿಶ್ರಿತವಾದ ಉದಕವನ್ನು ರತ್ನಮಣಿಮಯವಾದ ಚಿನ್ನದ ಪಾತ್ರೆಯಲ್ಲಿ ತಂದಿರುತ್ತೇನೆ. ಅರ್ಘ್ಯಜಲವನ್ನು ಸ್ವೀಕರಿಸುವವಳಾಗು.

### ೯. ಆಚಮನೋಪಚಾರ

ಜಲಜದ್ಯುತಿನಾ ಕರೇಣ ಜಾತೀ
ಫಲತಕ್ಕೋಲಲವಂಗಗಂಧಯುಕ್ತೈಃ |
ಅಮೃತೈರಮೃತೈರಿವಾತಿಶೀತೈಃ
ಭಗವತ್ಯಾಚಮನಂ ವಿಧೀಯತಾಮ್ || ||೯||

ಹೇ ಸ್ಥಿತಿಕಾರಿಣಿ, ಜಾಯಿಕಾಯಿ, ತಕ್ಕೋಲ , ಲವಂಗ ಮೊದಲಾದ ಪರಿಮಳ ವೃಕ್ಷ ದ್ರವ್ಯಗಳಿಂದ ಮಿಶ್ರಿತವಾದ ಸುಗಂಧ ಭರಿತವಾಗಿರುವ ಅಮೃತದಂತಿರುವ, ಅತಿ ಶೀತಲವಾದ ಆಚಮನ ಜಲವನ್ನು ಕಮಲದಂತೆ ಕಾಂತಿಯುತವಾಗಿರುವ ಕೈಗಳಿಂದ ಸ್ವೀಕರಿಸು.

ತದಿದಂ ಜಗದಂಬ ತೇಽರ್ಪಿತಂ
ಮಧುಪರ್ಕಂ ಜನನಿ ಪ್ರಗೃಹ್ಯತಾಮ್ ॥ ॥೧೦॥

ಹೇ ಜಗದಂಬೆ, ಕನಕಸಂಪುಟದಲ್ಲಿ ಸುಂದರವಾಗಿ ಮಡಿಸಿ ಶುಭ್ರವಾಗಿ ಇರಿಸಿ ತಂದಿರುವ ಈ ಮಧುಪರ್ಕವನ್ನು ನಿನಗಾಗಿ ತಂದಿರುತ್ತೇನೆ. ದಯಮಾಡಿ ಸ್ವೀಕರಿಸು.

## ೧೧. ತೈಲೋಪಚಾರ

ಏತಚ್ಚಂಪಕತೈಲಮಂಬ ವಿವಿಧೈಃ ಪುಷ್ಪೈರ್ಮುಹುರ್ವಾಸಿತಂ
ನ್ಯಸ್ತಂ ರತ್ನಮಯೇ ಸುವರ್ಣಚಷಕೇ ಭೃಂಗೈರ್ಭ್ರಮದ್ಭಿರ್ವೃತಮ್ ।
ಸಾನಂದಂ ಸುರಸುಂದರೀಭಿರಭಿತೋ ಹಸ್ತೈರ್ಧೃತಂ ತೇ ಮಯಾ
ಕೇಶೇಷು ಭ್ರಮರಭ್ರಮೇಷು ಸಕಲೇಷ್ವಂಗೇಷು ಚಾಲಿಪ್ಯತೇ ॥ ॥೧೧॥

ಹೇ ಸೌಂದರ್ಯಸ್ವರೂಪಿಣಿ, ಸಂಪಿಗೆ ಮೊದಲಾದ ಬಗೆ ಬಗೆಯ ಸುಗಂಧ ಭರಿತ ಹೂವುಗಳಿಂದ ತಯಾರಿಸಿರುವ ಸುಗಂಧ ಭರಿತ ಅಭ್ಯಂಜನ ತೈಲವನ್ನು ಸುವರ್ಣ ಕರಂಡದಲ್ಲಿ ತಂದಿರುವೆ. ಪರಿಮಳವನ್ನು ಆಘ್ರಾಣಿಸಲು ದುಂಬಿಗಳು ಸುತ್ತುವರಿಯುತ್ತಿವೆ. ನಿನ್ನ ಸುತ್ತಲೂ ನೆರೆದಿರುವ ಸುರ ಸುಂದರಿಯರ ಸಹಾಯದಿಂದ ಇಂತಹ ಪರಿಮಳ ತೈಲವನ್ನು ಮೈಯಲ್ಲಿ ಲೇಪಿಸಿಕೊಳ್ಳುವ ಕೃಪೆಮಾಡು.

## ೧೨. ಸ್ನಾನೋಪಚಾರ

ಮಾತಃ ಕುಂಕುಮಪಂಕನಿರ್ಮಿತಮಿದಂ ದೇಹೀ ತವೋದ್ವರ್ತನಂ
ಭಕ್ತ್ಯಾಹಂ ಕಲಯಾಮಿ ಹೇಮರಜಸಾ ಸಂಮಿಶ್ರಿತಂ ಕೇಸರೈಃ ।
ಕೇಶಾನಾಮಲಕೈರ್ವಿಶೋಧ್ಯ ವಿಶದಾನ್ಕಸ್ತೂರಿಕೋದಂಚಿತೈಃ
ಸ್ನಾನಂ ತೇ ನವರತ್ನಕುಂಭಸಹಿತೈಃ ಸಂವಾಸಿತೋಷ್ಣೋದಕೈಃ ॥ ॥೧೨॥

ಹೇ ಜಗನ್ಮಾತೆ, ಕಾಶ್ಮೀರದಲ್ಲಿ ಬೆಳೆಯುವ ಸುಗಂಧ ನೀಡುವ ವೃಕ್ಷಗಳಿಂದ ತಯ್ಯಾರಿಸಿದ, ಮೈಗೆ ಸುಲಭವಾಗಿ ಲೇಪವಾಗುವ ಕುಂಕುಮದಂತಹ ಲೇಪನವಿದು. ಸುವರ್ಣದ ಕಾಂತಿಯಿರುವ ನೆಲ್ಲಿಯ ಕಾಯಿಗಳಿಂದ ಮಿಶ್ರಣಮಾಡಿ ಶೋಧಿಸಿದೆ. ನಿನ್ನ ಅಂದವಾದ ಕೂದಲುಗಳನ್ನು ತೊಳೆಯಲು ನವರತ್ನ ಖಚಿತವಾದ ಚಿನ್ನದ ಕರಂಡಗಳಲ್ಲಿ ಬಿಸಿ ನೀರು ಸಿದ್ಧವಾಗಿದೆ. ಸ್ನಾನ ಮಾಡುವ ಕೃಪೆಮಾಡು.

ಸ್ನಪಯಾಮಿ ತವಾಹಮಾದರಾತ್
ಜನನಿ ತ್ವಾಂ ಪುನರುಷ್ಣವಾರಿಭಿಃ || ||೧೩||

ಹೇ ಲೋಕರಕ್ಷಕಿ, ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆಗಳಿಂದ ಮಿಶ್ರಿತವಾದ ಅಮೃತದಿಂದ ನಿನಗೆ ಸ್ನಾನ ಮಾಡಿಸುತ್ತೇನೆ. ಪಂಚಾಮೃತ ಸ್ನಾನಾನಂತರದ ಬಿಸಿನೀರು ಸ್ನಾನವನ್ನು ಸ್ವೀಕರಿಸುವ ಕೃಪೆಮಾಡು ಏಳು, ಎದ್ದೇಳು.

## ೧೪. ಶುದ್ಧೋದಕ ಸ್ನಾನೋಪಚಾರ

ಏಲೋಶೀರಸುವಾಸಿತೈಃ ಸಕುಸುಮೈರ್ಗಂಗಾದಿತೀರ್ಥೋದಕೈಃ
ಮಾಣಿಕ್ಯಾಮಲಮೌಕ್ತಿಕಾಮೃತರಸೈಃ ಸ್ವಚ್ಛೈಃ ಸುವರ್ಣೋದಕೈಃ
ಮಂತ್ರಾನ್ವೈದಿಕತಾಂತ್ರಿಕಾನ್ ಪರಿಪಠನ್ ಸಾನಂದಮತ್ಯಾದರಾತ್
ಸ್ನಾನಂ ತೇ ಪರಿಕಲ್ಪಯಾಮಿ ಜನನಿ ಸ್ನೇಹಾತ್ತ್ವಮಂಗೀಕುರು || ||೧೪||

ಹೇ ಜಗದೇಕಶಕ್ತಿಸ್ವರೂಪಳೆ, ಏಲಕ್ಕಿ, ಲಾವಂಚದ ಬೇರುಗಳಿಂದ ಶುದ್ಧಗೊಳಿಸಿದ ಘಮ ಘಮಿಸುವ ಅರಳಿದ ಹೂವುಗಳಿಂದ ಮಿಶ್ರಿ ಮಾಡಿರುವ, ಮಾಣಿಕ್ಯ ಮೊದಲಾದ ನಿರ್ಮಲವಾದ ಬಿಳಿಯ ಮುತ್ತುಗಳಿಂದ ಕೂಡಿರುವ ಶುದ್ಧವಾದ ಗಂಗಾಜಲವನ್ನು ಚಿನ್ನದ ಹಂಡೆಗಳಲ್ಲಿ ತುಂಬಿ ತಂದಿರುತ್ತೇನೆ. ಆದರ ಪೂರ್ವಕವಾಗಿ ವೈದಿಕ ಮಂತ್ರಗಳನ್ನು ಪಠಿಸುತ್ತಾ ತಾಂತ್ರಿಕ ಶಬ್ದಗಳಿಂದ ನಿನ್ನ ಗಾನ ಮಾಡುತ್ತಾ ನಿನಗೆ ಸ್ನಾನ ಮಾಡಿಸುತ್ತೇನೆ. ಏಳು, ಎದ್ದೇಳು ಅದನ್ನು ಸ್ನೇಹದಿಂದ ಸ್ವೀಕರಿಸುವವಳಾಗು.

## ೧೫. ವಸ್ತ್ರೋಪಚಾರ

ಬಾಲಾರ್ಕದ್ಯುತಿ ದಾಡಮೀಯಕುಸುಮಪ್ರಸ್ಪರ್ಧಿ ಸರ್ವೋತ್ತಮಂ
ಮಾತಸ್ತ್ವಂ ಪರಿಧೇಹಿ ದಿವ್ಯವಸನಂ ಭಕ್ತ್ಯಾಮಯಾ ಕಲ್ಪಿತಮ್ |
ಮುಕ್ತಾಭಿರ್ಗ್ರಥಿತಂ ಸುಕಂಚುಕಮಿದಂ ಸ್ವೀಕೃತ್ಯ ಪೀತಪ್ರಭಂ
ತಪ್ತಸ್ವರ್ಣಸಮಾನವರ್ಣಮತುಲಂ ಪ್ರಾವರ್ಣಮಂಗೀಕುರು || ||೧೫||

ಹೇ ಸರ್ವಗುಣಸಂಪನ್ನೆ, ಆಗತಾನೇ ಉದಯಿಸಿರುವ ಸೂರ್ಯನ ಕಾಂತಿಯನ್ನೇ ಅಣಕಿಸುವಂತೆ ಸುಂದರವಾಗಿರುವ ದಾಳಿಂಬೆ ಹೂವಿನ ಸೌಂದರ್ಯವನ್ನು ಹಿಂದಿಕ್ಕುವ ದಿವ್ಯವಾದ ಉಡುಪುಗಳನ್ನು ತಂದಿರುವೆನು. ಈ ಕುಪ್ಪಸಗಳಿಗೆ ಮುತ್ತಿನ ಮಣಿಗಳನ್ನು

ಕೊರೆಯಲಾಗಿದೆ. ಮಂಗಳಕರವಾದ ಹಳದಿಯ ಬಣ್ಣದಿಂದ ಕೂಡಿದ ಚಿನ್ನದಂತಹ ಮೆರುಗಿನಿಂದ ಕೂಡಿರುವ ಹೊದೆಯುವ ವಸ್ತ್ರಗಳನ್ನು ನಿನಗಾಗಿ ಸಿದ್ಧ ಪಡಿಸಿ ತಂದಿರುವೆನು. ಕೃಪೆಮಾಡಿ ಸ್ವೀಕರಿಸುವವಳಾಗು.

### ೧೬. ಪಾದುಕೋಪಚಾರ

ನವರತ್ನಮಯೀ ಮಯಾರ್ಪಿತೇ
ಕಮನೀಯೇ ತಪನೀಯಪಾದುಕೇ |
ಸವಿಲಾಸಮಿದಂ ಪದದ್ವಯಂ
ಕೃಪಯಾ ದೇವಿ ತಯೋರ್ನಿಧೀಯತಾಮ್ || ||೧೬||

ಹೇ ಭಕ್ತೋದ್ಧಾರಕಳೆ, ಯಾವ ಪಾದಗಳ ದರ್ಶನದಿಂದ ಈ ಇಹ ಜನ್ಮದ ಬಂಧನದಿಂದ ಬಿಡುಗಡೆ ಹೊಂದುವೆವೋ ಅಂತಹ ಪಾದಗಳನ್ನು ಅಲಂಕರಿಸಲು ನವರತ್ನಮಯವಾದ, ಮನೋಹರವಾದ ಪಾದುಕೆಗಳನ್ನು ತಂದಿರುವೆನು. ಅವುಗಳನ್ನು ನಿನ್ನ ಪಾದಗಳಿಂದ ಪವಿತ್ರಗೊಳಿಸು ಬಾ ತಾಯಿ, ಬಾ.

### ೧೭. ಕೇಶಾಲಂಕಾರದ್ರವ್ಯೋಪಚಾರ

ಬಹುಭಿರಗರುಧೂಪೈಃ ಸಾದರಂ ಧೂಪಯಿತ್ವಾ
ಭಗವತಿ ತವ ಕೇಶಾನ್ ಕಂಕತೈರ್ಮಾರ್ಜಯಿತ್ವಾ |
ಸುರಭಿಭಿರರವಿಂದೈಶ್ಚಂಪಕೈಶ್ಚಾರ್ಚಯಿತ್ವಾ
ಝಟಿತಿ ಕನಕಸೂತ್ರೈರ್ಜೂಟಯನ್ವೇಷ್ಟಯಾಮಿ || ||೧೭||

ಹೇ ಭಕ್ತಾನುಗ್ರಹಕಾರಿಣಿ, ಅನೇಕ ರೀತಿಯ ಅಗರು ಧೂಪಗಳ ಧೂಮದಿಂದ ನಿನ್ನ ಮೃದುವಾದ ಕೂದಲುಗಳನ್ನು ಅಂದಗೊಳಿಸುತ್ತೇನೆ, ಬಾಚಣಿಗೆಯಿಂದ ಬಾಚಿ ಪರಿಮಳಬೀರುವ ಕುಮುದಹೂವುಗಳು ಹಾಗೂ ಸಂಪಿಗೆಯ ಹೂವುಗಳಿಂದ ಅಲಂಕರಿಸಿ ಚಿನ್ನದ ದಾರಗಳಿಂದ ಅವುಗಳನ್ನು ಹೆಣೆಯುತ್ತೇನೆ. ನನ್ನ ಈ ಉಪಚಾರವನ್ನು ಪ್ರೀತಿಯಿಂದ ಸ್ವೀಕರಿಸುವವಳಾಗು.

### ೧೮. ಅಂಜನಾಲಂಕಾರೋಪಚಾರ

ಸೌವೀರಾಂಜನಮಿದಮಂಬ ಚಕ್ಷುಷೋಸ್ತೇ-
ವಿನ್ಯಸ್ತಂ ಕನಕಶಲಾಕಯಾ ಮಯಾ ಯತ್ |
ತನ್ನ್ಯೂನಂ ಮಲಿನಮಪಿ ತ್ವದಕ್ಷಿಸಂಘಾತ್
ಬ್ರಹ್ಮೇಂದ್ರಾದ್ಯಭಿಲಷಣೀಯತಾಮಿಯಾಯ || ||೧೮||

ಮೆಚ್ಚುವಂತಾಯಿತು. ನಮ್ಮ ಉಪಚಾರವನ್ನು ಸ್ವೀಕರಿಸುವಂತವಳಾಗು.

### ೧೯. ಆಭರಣೋಪಚಾರ

ಮಂಜೀರೇ ಪದಯೋರ್ನಿಧಾಯ ರುಚಿರಾಂ ವಿನ್ಯಸ್ತಕಾಂಚೀಂ ಕಟಾ
ಮುಕ್ತಾಹಾರಮುರೋಜಯೋರನುಪಮಾಂ ನಕ್ಷತ್ರ ಮಾಲಾಂಗಲೇ |
ಕೇಯೂರಾಣಿ ಭುಜೇಷು ರತ್ನವಲಯಶ್ರೇಣೀಂ ಕರೇಷು ಕ್ರಮಾ -
ತ್ತಾಟಂಕೇ ತವ ಕರ್ಣಯೋರ್ವಿನಿದಧೇ ಶೀರ್ಷೇ ಚ ಚೂಡಾಮಣಿಮ್ ||||೧೯||

ಹೇ ತ್ರೈಲೋಕ್ಯ ಜನನಿಯೆ, ನಿನ್ನ ಎರಡು ಕಾಲುಗಳಿಗೂ ಸುಂದರವಾದ ರನ್ನದ ಗೆಜ್ಜೆಯನ್ನು ಕಟ್ಟಿರುತ್ತೇನೆ. ಸುಂದರವಾದ ಡಾಬನ್ನು ನಡುವಿಗೆ ಕಟ್ಟಿರುತ್ತೇನೆ. ವಕ್ಷಃಸ್ಥಳವನ್ನು ಮುತ್ತಿನ ಹಾರದಿಂದ ಅಲಂಕರಿಸಿರುತ್ತೇನೆ. ಅತಿ ಸುಂದರವಾದ ನಕ್ಷತ್ರ ಮಾಲೆಗಳನ್ನು ಕುತ್ತಿಗೆಗೆ ತೊಡಿಸಿರುತ್ತೇನೆ. ಭುಜಗಳಿಗೆ ಭುಜಕೀರ್ತಿಗಳನ್ನೂ, ತೋಳುಗಳಿಗೆ ರತ್ನದ ಬಳೆಗಳನ್ನೂ, ಕಿವಿಗಳಿಗೆ ನಿನಗೆ ತಕ್ಕುದಾದ ಓಲೆಗಳನ್ನು ತೊಡಿಸಿರುತ್ತೇನೆ. ತಲೆಯನ್ನು ಅತಿ ಸುಂದರವಾದ ಚೂಡಾಮಣಿಯ ಮುಕುಟದಿಂದ ಅಲಂಕರಿಸಿರುತ್ತೇನೆ. ನನ್ನ ಸೇವೆಯನ್ನು ಸ್ವೀಕರಿಸುವಂತಹವಳಾಗು.

### ೨೦. ಸುವರ್ಣಾಭರಣೋಪಚಾರ

ಧಮ್ಮಿಲ್ಲೇ ತವ ದೇವಿ ಹೇಮಕುಸುಮಾನ್ಯಾದಾಯ ಫಾಲಸ್ಥಲೇ
ಮುಕ್ತಾರಾಜಿವಿರಾಜಮಾನತಿಲಕಂ ನಾಸಾಪುಟೇ ಮೌಕ್ತಿಕಮ್ |
ಮಾತರ್ಮೌಕ್ತಿಕಜಾಲಿಕಾಂ ಚ ಕುಚಯೋಃ ಸರ್ವಾಂಗುಲೀಷೂರ್ಮಿಕಾಃ
ಕಟ್ಯಾಂ ಕಾಂಚನಕಿಂಕಿಣೀರ್ವಿನಿದಧೇ ರತ್ನಾವತಂಸಂ ಶ್ರುತೌ || ||೨೦||

ಹೇ ವಿಷ್ಣುವಕ್ಷಸ್ಥಲ ವಾಸಿನಿ, ನಿನ್ನ ಮುಡಿಯಲ್ಲಿ ಸುವರ್ಣಪುಷ್ಪಗಳನ್ನಿಡುವೆ, ಹಣೆಯಲ್ಲಿ ಮುತ್ತುಗಳ ಜೋಡಣೆಯಿಂದ ರಂಜಿತವಾದ ತಿಲಕವನ್ನು ಇರಿಸುವೆ, ಮೂಗಿನಲ್ಲಿ ಮೂಗುತಿಯನ್ನೂ, ಸ್ತನಗಳಿಗೆ ಮುತ್ತಿನ ಬಲೆಯಿಂದಲೂ, ಎಲ್ಲಾ ಬೆರಳುಗಳಿಗೂ ಚಿನ್ನದ ಉಂಗುರಗಳನ್ನೂ, ಕಿವಿಗಳಿಗೆ ತಲೆಯಿಂದ ಜೋತಾಡುವ ರತ್ನಾಭರಣಗಳನ್ನೂ ತೊಡಿಸಿ ಅಲಂಕರಿಸುತ್ತಿದ್ದೇನೆ. ಅವುಗಳನ್ನು ಮೆಚ್ಚಿ ಸ್ವೀಕರಿಸುವಂತಹವಳಾಗು.

## ೨೧. ಪರಿಮಳ ದ್ರವ್ಯೋಪಚಾರ

ಮಾತಃ ಫಾಲತಲೇ ತವಾತಿವಿಮಲೇ ಕಾಶ್ಮೀರಕಸ್ತೂರಿಕಾ
ಕರ್ಪೂರಾಗರುಭಿಃ ಕರೋಮಿ ತಿಲಕಂ ದೇಹೇಽಂಗರಾಗಂ ತತಃ |
ವಕ್ಷೋಜಾದಿಷು ಯಕ್ಷಕರ್ದಮರಸಂ ಸಿಕ್ತ್ವಾ ಚ ಪುಷ್ಪದ್ರವಂ
ಪಾದೌ ಚಂದನಲೇಪನಾದಿಭಿರಹಂ ಸಂಪೂಜಯಾಮಿ ಕ್ರಮಾತ್|| ||೨೧||

ಹೇ ಹರಿದ್ರಾಕುಂಕುಮಸುಶೋಭಿತೆ, ನಿನ್ನ ನಿರ್ಮಲವಾದ ಹಣೆಯಲ್ಲಿ ಕಾಶ್ಮೀರದ ಕಸ್ತೂರಿ ಕುಂಕುಮದಿಂದ ತಯಾರಿಸಿದ ತಿಲಕವನ್ನು ಇರಿಸುತ್ತೇನೆ. ಶರೀರಕ್ಕೆ ಕಸ್ತೂರಿಯ ಲೇಪನವನ್ನು ಮಾಡುವೆನು. ವಕ್ಷಃ ಪ್ರದೇಶದಲ್ಲಿ ಕರ್ಪೂರ, ಅಗರು, ಕಸ್ತೂರಿ, ತಕ್ಕೋಲ ಇವುಗಳಿಂದ ತಯಾರಿಸಿದ ಪರಿಮಳ ದ್ರವ್ಯಗಳ ಲೇಪನ ಮಾಡುವೆನು. ನಿನ್ನ ಪಾದದ್ವಯಗಳಿಗೆ ಶ್ರೀಗಂಧದ ಲೇಪನ ಮಾಡಿ ನಿನ್ನನ್ನು ಪೂಜಿಸುತ್ತೇನೆ. ನನ್ನ ಈ ಉಪಚಾರವನ್ನು ಸ್ವೀಕರಿಸುವವಳಾಗು.

## ೨೨. ಅಕ್ಷತೋಪಚಾರ

ರತ್ನಾಕ್ಷತೈ ಸ್ತ್ವಾಂ ಪರಿಪೂಜಯಾಮಿ
ಮುಕ್ತಾಫಲೈರ್ವಾರು ಚಿರೈರವಿದ್ಧೈಃ |
ಅಖಂಡಿತೈರ್ದೇವಿ ಯವಾದಿಭಿರ್ವಾ
ಕಾಶ್ಮೀರಪಂಕಾಂಕಿತತಂಡುಲೈರ್ವಾ || ||೨೨||

ಹೇ ದುರ್ಭಿಕ್ಷಧ್ವಂಸಿನಿ, ರತ್ನಾಕ್ಷತೆಗಳಿಂದ ನಿನ್ನನ್ನು ಚೆನ್ನಾಗಿ ಪೂಜಿಸುತ್ತೇನೆ. ಅಖಂಡವಾದ, ಮನೋಹರವಾದ, ಮುತ್ತುಗಳಿಂದ ಪೂರ್ಣವಾಗಿರುವ ಯವಾದಿಗಳಿಂದಲೂ, ಕಾಶ್ಮೀರದ ಕುಂಕುಮದಿಂದ ರಚಿತವಾದ ಅಕ್ಕಿಗಳಿಂದಲೂ ನಿನ್ನನ್ನು ಅರ್ಚಿಸುತ್ತೇನೆ.

## ೨೩. ತೈಲೋಪಚಾರ

ಜನನಿ ಚಂಪಕತೈಲಮಿದಂ ಪುರೋ
ಮೃಗಮದೋಪಯುತಂ ಪಟವಾಸಕಮ್ |
ಸುರಭಿಗಂಧಮಿದಂ ಚ ಚತುಸ್ಸಮಂ
ಸಪದಿ ಸರ್ವಮಿದಂ ಪರಿಗೃಹ್ಯತಾಮ್ || ||೨೩||

ಹೇ ಸೋಮಸೂರ್ಯಾಗ್ನಿಲೋಚನೆ, ಸಂಪಿಗೆಯ ಹೂವಿನಿಂದ ತೆಗೆದ ಎಣ್ಣೆ, ಪುನುಗು ಮೃಗದಿಂದ ದೊರೆತ ಸುಗಂಧ, ಕಸ್ತೂರಿ, ಸುರಭಿ ಮೊದಲಾದ ನಾಲ್ಕು ಸುಗಂಧ ದ್ರವ್ಯಗಳನ್ನು ಸಮನಾಗಿ ಬೆರೆಸಿದ ಪರಿಮಳ ತೈಲ ದ್ರವ್ಯವನ್ನು ನಿನ್ನ ಮುಂದೆ ಇರಿಸಿರುತ್ತೇನೆ. ಕೃಪೆಮಾಡಿ ಸ್ವೀಕರಿಸುವವಳಾಗು.

## ೨೪. ಸಿಂಧೂರೋಪಚಾರ

ಸೀಮಂತೇ ತೇ ಭಗವತಿ ಮಯಾ ಸಾದರಂ ನ್ಯಸ್ತಮೇತತ್
ಸಿಂಧೂರಂ ಮೇ ಹೃದಯಕಮಲೇ ಹರ್ಷವರ್ಷಂ ತನೋತಿ |
ಬಾಲಾದಿತ್ಯದ್ಯುತಿರಿವ ಸದಾ ಲೋಹಿತಾ ಯಸ್ಯ ಕಾಂತೀ -
ರಂತರ್ಧ್ವಾಂತಂ ಹರತಿ ಸಕಲಂ ಚೇತಸಾ ಚಿಂತಯೈವಾ || ||೨೪||

ಹೇ ಅಂಬೆ, ನಿನ್ನ ಬೈತಲೆಯಲ್ಲಿ ಸಿಂಧೂರವನ್ನು ಲೇಪಿಸಿರುತ್ತೇನೆ. ನಿನ್ನ ಹೃತ್ಕಮಲದಲ್ಲಿ ಅದು ಆನಂದದ ಮಳೆಗರೆಸುತ್ತದೆ. ಬಾಲಸೂರ್ಯನ ಕಾಂತಿಯಂತೆ ಅದು ಮನಸ್ಸಿನ ಚಿಂತೆಯನ್ನು ದೂರ ಮಾಡುತ್ತದೆ. ನಮ್ಮ ಉಪಚಾರವನ್ನು ಸ್ವೀಕರಿಸಿ ನಮ್ಮ ಹೃದಯದಲ್ಲಿರುವ ಕತ್ತಲೆಯನ್ನು ದೂರ ಮಾಡುವವಳಾಗು.

## ೨೫. ಸುಗಂಧ ಪುಷ್ಪೋಪಚಾರ

ಮಂದಾರಕುಂದಕರವೀರಲವಂಗಪುಷ್ಪೈಃ
ತ್ವಾಂ ದೇವಿ ಸಂತತಮಹಂ ಪರಿಪೂಜಯಾಮಿ
ಜಾತೀಜಪಾಬಕುಲಚಂಪಕಕೇತಕಾದಿ |
ನಾನಾವಿಧಾನಿ ಕುಸುಮಾನಿ ಚ ತೇಽರ್ಪಯಾಮಿ || ||೨೫||

ಹೇ ಮಹಾಗೌರಿ, ಮಂದಾರ, ಕುಂದ, ಕರವೀರ, ಲವಂಗದ ಹೂವುಗಳಿಂದ ಯಾವಾಗಲೂ ನಿನ್ನನ್ನು ಪೂಜಿಸುತ್ತೇನೆ. ದಾಸವಾಳ, ಸಂಪಿಗೆ, ತಾಳೆ ಮೊದಲಾದ ಹೂವುಗಳನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ನೀನು ಅಲಂಕರಿಸಿಕೊಂಡು ನಮ್ಮನ್ನು ಕೃತಾರ್ಥರನ್ನಾಗಿ ಮಾಡು.

## ೨೬. ಸುಂದರ ಪುಷ್ಪೋಪಚಾರ

ಮಾಲತೀವಕುಲಹೇಮಪುಷ್ಪಿಕಾ –
ಕಾಂಚನಾರಕರವೀರಕೇತಕೈಃ |
ಕರ್ಣಿಕಾರಗಿರಿಕರ್ಣಿಕಾದಿಭಿಃ
ಪೂಜಯಾಮಿ ಜಗದಂಬ ತೇ ವಪುಃ || ||೨೬||

ಹೇ ಸೌಂದರ್ಯಮಯಿ, ನಿನಗಾಗಿ ಮಾಲತಿ, ವಕುಲ, ಹಳದಿ ಮಲ್ಲಿಗೆ, ನಾಗಸಂಪಿಗೆ, ಕರವೀರ, ತಾಳೆ, ಕರ್ಣಿಕಾರ, ಬೆಟ್ಟದಾವರೆ, ಮೊದಲಾದ ಹೂವುಗಳನ್ನು ಆರಿಸಿತಂದಿರುತ್ತೇನೆ. ನನ್ನ ಪೂಜೆಯನ್ನು ಸ್ವೀಕರಿಸುವವಳಾಗು.

## ೨೭. ಮಾಲೋಪಚಾರ

ಪಾರಿಜಾತಶತಪತ್ರಪಾಟಲೈಃ
ಮಲ್ಲಿಕಾವಕುಲಚಂಪಕಾದಿಭಿಃ |
ಅಂಬುಜೈಃ ಸುಕುಸುಮೈಶ್ಚ ಸಾದರಂ
ಪೂಜಯಾಮಿ ಜಗದಂಬ ತೇ ವಪುಃ || ||೨೭||

ಹೇ ಸರ್ವಗುಣ ಸಂಪನ್ನೆ, ನಿನಗಾಗಿ ಪಾರಿಜಾತ, ಕಮಲ, ಪಾದರಿ, ಮಲ್ಲಿಗೆ, ವಕುಲ, ಸಂಪಿಗೆ ಬಿಳಿಯ ಕಮಲ ಮುಂತಾದ ಶ್ರೇಷ್ಠ ಪುಷ್ಪಗಳನ್ನು ತಂದಿರುತ್ತೇನೆ. ನನ್ನ ಆದರದ ಪೂಜೆಯನ್ನು ಸ್ವೀಕರಿಸುವವಳಾಗು.

## ೨೮. ಧೂಪೋಪಚಾರ

ಲಾಕ್ಷಾಸಂಮಿಲಿತೈಃ ಸೀತಾಭ್ರಸಹಿತೈಃ ಶ್ರೀವಾಸಸಂಮಿಶ್ರಿತೈಃ
ಕರ್ಪೂರಾಕಲಿತೈಃ ಶಿರ್ಯೈರ್ಮಧಯುತೈರ್ಗೋಸರ್ಪಿಷಾಲೋಹಿತೈಃ |
ಶ್ರೀಖಂಡಾಗರುಗುಗ್ಗುಲಪ್ರಭೃತಿಖಿಃ ನಾನಾವಿಧೈರ್ವಸ್ತುಭಿಃ
ಧೂಪಂ ತೇ ಪರಿಕಲ್ಪಯಾಮಿ ಜನನಿ ಸ್ನೇಹಾತ್ತ್ವಮಂಗೀಕುರು || ||೨೮||

ಹೇ ಜ್ಞಾನ ದಾತೇ, ಅರಗಿನ ರಸ, ಬಿಳಿಯ ಮೋಡದಂತೆ ಶುಭ್ರವಾದ ಶ್ರೀಗಂಧ, ಪಚ್ಚೆ ಕರ್ಪೂರ, ಜೇನುತುಪ್ಪ, ಮೆಣಸಿನ ಬಳ್ಳಿಯ ಬೇರು, ಹಸುವಿನ ತುಪ್ಪ, ಶ್ರೀಗಂಧ, ಅಗರು, ಗುಗ್ಗುಲು ಮುಂತಾದ ಅನೇಕ ವಸ್ತುಗಳನ್ನು ಸೇರಿಸಿ ತಯಾರಿಸಿದ ಧೂಪವನ್ನು ಅಮ್ಮ ಅಮ್ಮಾ, ನಿನಗೆ ತಂದಿರುವೆನು. ಅವುಗಳನ್ನು ಸ್ನೇಹದಿಂದ ಅಂಗೀಕರಿಸು.

## ೨೯. ದೀಪೋಪಚಾರ

ರತ್ನಾಲಂಕೃತಹೇಮಪಾತ್ರನಿಹಿತೈರ್ಗೋಸರ್ಪಿಷಾಲೋಡಿತೈ-
ರ್ದೀಪೈರ್ದೀರ್ಘಕರಾಂಧಕಾರಭಿದುರೈರ್ಬಾಲಾರ್ಕಕೋಟಿಪ್ರಭೈಃ |
ಆತಾಮ್ರಜ್ವಲ ದುಜ್ವಲಪ್ರವಿಲಸದ್ರತ್ನಪ್ರದೀಪೈಸ್ತಥಾ
ಮಾತಸ್ತ್ವಾಮಹಮಾದರಾದನುದಿನಂ ನೀರಾಜಯಾಮ್ಯುಚ್ಚಕೈಃ || ||೨೯||

ಹೇ ಅಖಿಂಡಬ್ರಹ್ಮಾಂಡರೂಪಿಣಿ, ರತ್ನಗಳಿಂದ ಅಲಂಕೃತವಾದ ಚಿನ್ನದ ಪಾತ್ರೆಗಳಲ್ಲಿ ತುಂಬಿರುವ ಹಸುವಿನ ತುಪ್ಪದಿಂದ ಮಾಡಿದ, ಅಂಧಕಾರವನ್ನು ದೂರಮಾಡುವ, ಕೋಟಿ ಕೋಟಿ ಬಾಲ ಸೂರ್ಯನಂತೆ ಪ್ರಕಾಶಮಾನವಾಗಿರುವ, ಹಾಗೂ ಸಂಪೂರ್ಣವಾಗಿ ಕೆಂಪಾದ ಕಾಂತಿಯಿಂದ ಹೊಳೆಯುವ ರತ್ನದ ದೀಪಗಳಿಂದ ಆದರದಿಂದ ಪ್ರತಿದಿನವೂ ನಿನಗೆ ಆರತಿ ಎತ್ತುವೆನು. ನನ್ನ ಈ ಸೇವೆಯನ್ನು ಸ್ವೀಕರಿಸುವವಳಾಗು.

ಏಲಾಜೀರಕಹಿಂಗುನಾಗರನಿಶಾಕುಸ್ತುಂಭರೀಸಂಸ್ಕೃತೈಃ
ಶಾಕೈಃ ಸಾಕಮಹಂ ಸುಧಾಧಿಕರಸೈಃ ಸಂತರ್ಪಯಾಮ್ಯರ್ಚನಮ್ || ||೩೦||

ಹೇ ವಾಗ್ದೇವಿ, ತೊವ್ವೆ, ಹಿಟ್ಟಿನಿಂದ ಮಾಡಿದ ಭಕ್ಷ್ಯಗಳು, ಬಿಳಿಯ ತುಪ್ಪ, ವಡೆಗಳು, ಮಧುರವಾದ ಜೇನು ತುಪ್ಪದ ಜೊತೆ ಕಳಿತ ಬಾಳೆಯ ಹಣ್ಣುಗಳು, ಏಲಕ್ಕಿ, ಜೀರಿಗೆ, ಇಂಗು, ಶುಂಠಿ, ಕೊತ್ತುಂಬರಿ ಪತ್ರಗಳಿಂದ ಆವೃತವಾದ ಬಗೆ ಬಗೆಯ ತರಕಾರಿ ಪಲ್ಯೆಗಳು, ಇವುಗಳಿಂದ ಕೂಡಿದ ಅಮೃತಕ್ಕಿಂತಲೂ ರುಚಿಯಿಂದ ಕೂಡಿದ, ಆನಂದವನ್ನು ತರುವ ಷಡ್ರಸಗಳಿಂದ ಕೂಡಿದ ಮೊಸರು, ಹಾಲು, ಪಾಯಸ, ಶಾಲ್ಯನ್ನಗಳ ಪರಂಪರೆಯನ್ನೇ ನಿನಗೆ ನನ್ನ ಪೂಜೆಯೊಡನೆ ಸಮರ್ಪಿಸುತ್ತಿದ್ದೇನೆ. ದಯಮಾಡಿ ಸ್ವೀಕರಿಸು.

### ೩೧. ಭಕ್ಷ್ಯೋಪಚಾರ

ಸಾಪೂಪಸೂಪದಧಿದುಗ್ಧಸಿತಾಘೃತಾನಿ
ಸುಸ್ವಾದುಭಕ್ತಪರಮಾನ್ನಪುರಃಸರಾಣಿ |
ಶಾಕೋಲ್ಲಸನ್ಮರಿಚಜೀರಕಬಾಹ್ಲಿಕಾನಿ
ಭಕ್ಷ್ಯಾಣಿ ಭುಂಕ್ಷ್ವ ಜಗದಂಬ ಮಯಾರ್ಪಿತಾನಿ || ||೩೧||

ಹೇ ಅನ್ನಪೂರ್ಣೇಶ್ವರಿ, ಹಿಟ್ಟಿನಿಂದ ಮಾಡಿದ ತಿನಿಸುಗಳು, ಮೊಸರು, ಹಾಲು, ತುಪ್ಪ, ರುಚಿಯಾದ ಅನ್ನ, ಪಾಯಸ, ಮೆಣಸು, ಜೀರಿಗೆ ಮತ್ತು ಇಂಗುಗಳ ಸಹಾಯದಿಂದ ತಯಾರಿಸಿದ ಪರಿಮಳ ಸೂಸುವ ವಿವಿಧ ಭಕ್ಷ್ಯಗಳು ನನ್ನಿಂದ ಅರ್ಪಿಸಲ್ಪಟ್ಟಿದೆ. ದೇವಿ ಸ್ವೀಕರಿಸುವವಳಾಗು.

### ೩೨. ಪಾನಕೋಪಚಾರ

ಕ್ಷೀರಮೇತದಿದಮುತ್ತಮೋತ್ತಮಂ
ಪ್ರಾಜ್ಯಮಾಜ್ಯಮಿದಮುಜ್ವಲಂ ಮಧು |
ಮಾತರೇತದಮೃತೋಪಮಂ ಪಯಃ
ಸಂಭ್ರಮೇಣ ಪರಿಪೀಯತಾಂ ಮುಹುಃ || ||೩೨||

ಹೇ ಕಲ್ಯಾಣಗುಣಸಂಪನ್ನೆ, ಈ ಹಾಲು ಅತ್ಯಂತ ಶ್ರೇಷ್ಠವಾದುದು. ತುಪ್ಪವು ಶುದ್ಧವಾಗಿದ್ದು ಈಗ ತಾನೇ ತಯಾರಿಸಿದುದು. ಹೊಸದಾದ ಜೇನು ತುಪ್ಪ, ಅಮೃತಕ್ಕೆ ಸಮಾನವಾದ ನೀರು ಇವೆಲ್ಲವನ್ನೂ ಮತ್ತೆ ಮತ್ತೆ ಸಂಭ್ರಮದಿಂದ ಸ್ವೀಕರಿಸುವ ಕೃಪೆಮಾಡು.

### ೩೩. ಉಷ್ಣೋದಕೋಪಚಾರ

ಉಷ್ಣೋದಕೈಃ ಪಾಣಿಯುಗಂ ಮುಖಂ ಚ
ಪ್ರಕ್ಷಾಲ್ಯ ಮಾತಃ ಕಲಧೌತಪಾತ್ರೇ |
ಕರ್ಪೂರಮಿಶ್ರೇಣ ಸಕುಂಕುಮೇನ
ಹಸ್ತೌ ಸಮುದ್ವರ್ತಯ ಚಂದನೇನ || ||೩೩||

ಹೇ ಜಗನ್ಮೋಹಿನಿ, ಚಿನ್ನದ ಪಾತ್ರೆಯಲ್ಲಿ ನಿನ್ನ ಎರಡೂ ಹಸ್ತಗಳನ್ನು ಶುದ್ಧಗೊಳಿಸಲು ಪಚ್ಚ ಕರ್ಪೂರ, ಕೇಸರಿ,ಮಿಶ್ರಿತವಾದ ಬಿಸಿನೀರನ್ನು ಸಿದ್ಧಗೊಳಿಸಿರುತ್ತೇನೆ. ಶ್ರೀಗಂಧದ ರಸದಿಂದ ತಯಾರಿಸಿರುವ ಆ ನೀರು ನಿನ್ನ ಕೈಗಳನ್ನು ಶುದ್ಧಗೊಳಿಸಲು ಕಾದು ಕುಳಿತಿದೆ. ಅದನ್ನು ಸ್ವೀಕರಿಸುವವಳಾಗು.

### ೩೪. ಗಂಗಾಜಲೋಪಚಾರ

ಅತಿಶೀತಮುಶೀರವಾಸಿತಂ
ತಪನೀಯೇ ಕಲಶೇ ನಿವೇಶಿತಮ್ |
ಪಟಪೂತಮಿದಂ ಜಿತಾಮೃತಂ
ಶುಚಿ ಗಂಗಾಜಲಮಂಬಪೀಯತಾಮ್ || ||೩೪||

ಹೇ ಭಕ್ತಜನಹೃದಯಮಂದಾರೆ, ಅತ್ಯಂತ ತಣ್ಣಗಿರುವ ಲಾವಂಚದ ಬೇರಿನಿಂದ ಪರಿಮಳ ಬೀರುವ, ಚಿನ್ನದ ಕಲಶದಲ್ಲಿ ತುಂಬಿರುವ, ತೆಳುವಾದ ವಸ್ತ್ರದಿಂದ ಶೋಧಿಸಿರುವ ಅಮೃತ ರುಚಿ ನೀಡುವ ಗಂಗಾಜಲವನ್ನು ಸೇವಿಸುವ ಕೃಪೆ ಮಾಡುವವಳಾಗು.

### ೩೫. ಫಲೋಪಚಾರ

ಜಂಬ್ವಾಮ್ರರಂಭಾಫಲಸಂಯುತಾನಿ
ದ್ರಾಕ್ಷಾಫಲಕ್ಷೌದ್ರಸಮನ್ವಿತಾನಿ |
ಸನಾರಿಕೇಲಾನಿ ಸದಾಡಿಮಾನಿ
ಫಲಾನಿ ತೇ ದೇವಿ ಸಮರ್ಪಯಾಮಿ || ||೩೫||

ಹೇ ಪ್ರಕಾಶಸ್ವರೂಪಿಣಿ, ನೇರಳೆ, ಮಾವು, ಬಾಳೆ, ದ್ರಾಕ್ಷಿ, ತೆಂಗಿನಕಾಯಿ, ದಾಳಿಂಬೆ ಮುಂತಾದ ಹಣ್ಣುಗಳನ್ನು ಜೇನುತುಪ್ಪದೊಂದಿಗೆ ಸೇವಿಸಲು ನಿನಗೆ ಸಮರ್ಪಿಸುತ್ತಿದ್ದೇನೆ. ದಯಮಾಡಿ ಸ್ವೀಕರಿಸುವವಳಾಗು.



ಸಬೀಜಪೂರಾಣಿ ಸಬಾದರಾಣಿ
ಫಲಾನಿ ತೇ ದೇವಿ ಸಮರ್ಪಯಾಮಿ || ||೩೭||

ಹೇ ಅನಂತಗುಣಗಂಭೀರೆ, ಕುಂಬಳದಹಣ್ಣು, ಪಡವಲಕಾಯಿ, ನಿಂಬೆ ಹಣ್ಣು, ಕಿತ್ತಳೆಹಣ್ಣು, ಸೀಬೆಹಣ್ಣು, ಎಲಚಿಹಣ್ಣು ಮೊದಲಾದವುಗಳನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ಸ್ವೀಕರಿಸುವಂತಹವಳಾಗು.

೩೭. ತಾಂಬೂಲೋಪಚಾರ

ಕರ್ಪೂರೇಣ ಯುತೈರ್ಲವಂಗಸಹಿತೈಸ್ತಕ್ಕೋಲಚೂರ್ಣಾನ್ವಿತೈಃ
ಸುಸ್ವಾದುಕ್ರಮುಕೈಃ ಸಗೌರಖದಿರೈಃ ಸುಸ್ನಿಗ್ಧಜಾತೀಫಲೈಃ |
ಮಾತಃ ಕೈತಕಪತ್ರಪಾಂಡುರುಚಿಭಿ ಸ್ತಾಂಬೂಲವಲ್ಲೀದಲೈಃ
ಸಾನಂದಂ ಮುಖಮಂಡನಾರ್ಥಮತುಲಂ ತಾಂಬೂಲಮಂಗೀಕುರು || ||೩೭||

ಹೇ ಸಹಸ್ರಸ್ವರೂಪಿಣಿ, ಪಚ್ಚಕರ್ಪೂರ, ಲವಂಗ, ತಕ್ಕೋಲವೆಂಬ ಪರಿಮಳ ದ್ರವ್ಯದ ಪುಡಿ, ರುಚಿಕರವಾದ ಅಡಿಕೆ, ಬಿಳಿಯ ಕಗ್ಗಲಿ, ಕಂಪನ್ನು ಬೀರುವ ಜಾಯಿಕಾಯಿ, ತಾಳೆಯ ಹೂವಿನ ಎಲೆಯ ಬಿಳಿಯ ಧೂಳಿನಿಂದ ಹಾಗೂ ಎಳೆಯ ಚಿಗುರಾದ ವೀಳೆಯದ ಎಲೆ ಇವುಗಳಿಂದ ತುಂಬಿದ ತಾಂಬೂಲವನ್ನು ಬಾಯಿತುಂಬಾ ಸವಿಯಲು ಸಮರ್ಪಿಸಿರುತ್ತೇನೆ. ಆನಂದದಿಂದ ಸ್ವೀಕರಿಸು.

೩೮. ಪೂಗೀಫಲೋಪಚಾರ

ಏಲಾಲವಂಗಾದಿ ಸಮನ್ವಿತಾನಿ
ತಕ್ಕೋಲಕರ್ಪೂರವಿಮಿಶ್ರಿತಾನಿ |
ತಾಂಬೂಲವಲ್ಲೀದಲಸಂಯುತಾನಿ
ಪೂಗಾನಿ ತೇ ದೇವಿ ಸಮರ್ಪಯಾಮಿ || ||೩೮||

ಹೇ ಸರ್ವಕಾರಣಸ್ಥಿತಿಹೇತುವೆ, ಏಲಕ್ಕಿ, ಲವಂಗ, ಮುಂತಾದವುಗಳಿಂದ ಕೂಡಿ, ತಕ್ಕೋಲ ಪಚ್ಚ ಕರ್ಪೂರಗಳಿಂದ ಮಿಶ್ರಿತವಾದ ತಾಂಬೂಲದ ವೀಳೆಯದ ಎಲೆಯೊಡಗೂಡಿದ ಅಡಿಕೆಗಳನ್ನು ನಿನಗೆ ಸಮರ್ಪಿಸುತ್ತಿದ್ದೇನೆ.

### ೩೯. ಚೂರ್ಣೋಪಚಾರ

ತಾಂಬೂಲನಿರ್ಜಿತಸುತಪ್ತಸುವರ್ಣವರ್ಣಾಂ
ಸ್ವರ್ಣೋಕ್ತಪೂಗ ಫಲಮೌಕ್ತಿಕಚೂರ್ಣಯುಕ್ತಮ್ |
ಸೌವರ್ಣಪಾತ್ರನಿಹಿತಂ ಖದಿರೇಣ ಸಾರ್ಧಂ
ತಾಂಬೂಲಮಂಬ ವದನಾಂಬುರುಹೇ ಗೃಹಾಣ || ||೩೯||

ಹೇ ಪರಮಪಾವನಿಯೆ, ಕಾದ ಚಿನ್ನದ ಬಣ್ಣದ ಕಾಂತಿಯನ್ನು ಮೀರಿಸುವ, ಚಿನ್ನ, ಮುತ್ತು ಮತ್ತು ಅಡಿಕೆಗಳ ಮಿಶ್ರಣದಿಂದ ತಯಾರಿಸಿದ ಚೂರ್ಣವನ್ನು ಚಿನ್ನದ ಪಾತ್ರೆಯಲ್ಲಿ ಕಗ್ಗಲಿಯೊಡನೆ ಇರಿಸಿರುವ ಚೂರ್ಣವನ್ನು ಸ್ವೀಕರಿಸುವ ಕೃಪೆಮಾಡು.

### ೪೦. ದೀಪೋಪಚಾರ

ಮಹತಿ ಕನಕಪಾತ್ರೇ ಸ್ಥಾಪಯಿತ್ವಾ ವಿಶಾಲಾನ್
ಡಮರುಸದೃಶರೂಪಾನ್ಬದ್ಧಗೋಧೂಮದೀಪಾನ್ |
ಬಹುಘೃತಮಥ ತೇಷು ನ್ಯಸ್ಯ ದೀಪಾನ್ ಪ್ರಕೃಷ್ಟಾನ್
ಭುವನಜನನಿ ಕುರ್ವೇ ನಿತ್ಯಮಾರಾರ್ತಿಕಂ ತೇ || ||೪೦||

ಹೇ ಜ್ಯೋತಿಃ ಸ್ವರೂಪಳೆ, ಅತಿ ದೊಡ್ಡದಾದ ಚಿನ್ನದ ಪಾತ್ರೆಗಳಲ್ಲಿ ವಿಶಾಲವಾದ ಆಕಾರದಿಂದ ಕೂಡಿದ ಡಮರುಸದೃಶವಾದ ಗೋಧಿಯ ಹಿಟ್ಟಿನಿಂದ ಮಾಡಿದ ದೀಪಗಳನ್ನು ಇರಿಸಿ ಅವುಗಳ ತುಂಬಾ ತುಪ್ಪವನ್ನು ತುಂಬಿ ಬೆಳಗುತ್ತಿರುವ ದೀಪಗಳಿಂದ ತ್ರಿಭುವನಜನನಿ ನಿನಗೆ ಆರತಿಯನ್ನು ಎತ್ತುತ್ತೇನೆ. ಸ್ವೀಕರಿಸುವವಳಾಗು.

### ೪೧. ನೀರಾಜನೋಪಚಾರ

ಸವಿನಯಮಥ ದತ್ವಾ ಜಾನುಯುಗ್ಮಂ ಧರಣ್ಯಾಂ
ಸಪದಿ ಶಿರಸಿ ಧೃತ್ವಾ ಪಾತ್ರಮಾರಾರ್ತಿಕಸ್ಯ |
ಮುಖಕಮಲಸಮೀಪೇ ತೇಽಂಬ ಸಾರ್ಧಂ ತ್ರಿವಾರಂ
ಭ್ರಮಯತಿ ಮಯಿ ಭೂಯಾತ್ತೇ ಕೃಪಾರ್ದ್ರಃ ಕಟಾಕ್ಷಃ || ||೪೧||

ಹೇ ಭಕ್ತೋದ್ಧಾರಕಳೆ, ವಿನಯಪೂರ್ವಕವಾಗಿ ನೆಲದ ಮೇಲೆ ಎರಡು ಮಂಡಿಗಳನ್ನು ಊರಿ ತಲೆಯ ಮೇಲೆ ನೀರಾಜನವನ್ನು ಇರಿಸಿ ಕೊಂಡು ಮಂತ್ರಾದಿಗಳನ್ನು ಉಚ್ಚರಿಸುತ್ತಾ ನಿನ್ನ ಮುಖಾರವಿಂದಗಳಿಗೆ ಮೂರು ಬಾರಿ ಆರತಿ ಮಾಡುತ್ತಿರುವೆನು, ತಾಯೆ ಅದನ್ನು ಸ್ವೀಕರಿಸಿ ನಿನ್ನ ಕೃಪಾಕಟಾಕ್ಷವನ್ನು ನನ್ನ ಮೇಲೆ ಬೀರುವವಳಾಗು.

ಮಿಲಿತವಿವಿಧಯುಕ್ತಾಂ ದಿವ್ಯಮಾಣಿಕ್ಯಯುಕ್ತಾಂ
ಜನನಿ ಕನಕವೃಷ್ಟಿಂ ದಕ್ಷಿಣಾಂ ತೇಽರ್ಪಯಾಮಿ || ||೪೨||

ಹೇ ಜ್ಞಾನದಾಯಿನಿ, ಮಣಿಗಳಿಂದ ಮಿಶ್ರಿತವಾದ ಮುತ್ತುಗಳನ್ನು ನಿನಗೆ ಸಮರ್ಪಿಸುತ್ತೇನೆ. ಮೂರು ಲೋಕಗಳಲ್ಲಿಯೂ ಮೆರೆಯಬಹುದಾದಂತಹ ಸುಂದರವಾದ ವಸ್ತ್ರಗಳನ್ನು ಸಮರ್ಪಿಸುತ್ತಿದ್ದೇನೆ. ಅನೇಕ ಮುತ್ತುಗಳು ಮಾಣಿಕ್ಯಗಳಿಂದ ಕೂಡಿದ ಸುವರ್ಣವೃಷ್ಟಿ ರೂಪವಾದ ದಕ್ಷಿಣೆಯನ್ನು ಸಮರ್ಪಿಸುತ್ತಿದ್ದೇನೆ. ಸ್ವೀಕರಿಸುವವಳಾಗು.

### ೪೩. ಛತ್ರೋಪಚಾರ

ಮಾತಃ ಕಾಂಚನ ದಂಡಮಂಡಿತಮಿದಂ ಪೂರ್ಣೇಂದುಬಿಂಬಪ್ರಭಂ
ನಾನಾರತ್ನವಿಶೋಭಿಹೇಮಕಲಶಂ ಲೋಕತ್ರಯಾಹ್ಲಾದಕಮ್ |
ಭಾಸ್ವನ್ಮೌಕ್ತಿಕಜಾಲಿಕಾಪರಿವೃತಂ ಪ್ರೀತ್ಯಾತ್ಮಹಸ್ತೇ ಧೃತಂ
ಛತ್ರಂ ತೇ ಪರಿಕಲ್ಪಯಾಮಿ ಶಿರಸಿ ತ್ವಷ್ಟ್ರಾ ಸ್ವಯಂ ನಿರ್ಮಿತಮ್ || ||೪೩||

ಹೇ ಅನುಗ್ರಹಕಾರಿಣಿ, ಇದು ಬೆಳ್ಗೊಡೆ, ಇದನ್ನು ಸಾಕ್ಷಾತ್ ತ್ವಷ್ಟ್ರುವು ನಿನಗಾಗಿ ನಿರ್ಮಿಸಿದುದು. ಇದರ ದಂಡವನ್ನು ಚಿನ್ನದಿಂದ ಮಾಡಲಾಗಿದೆ. ಪೂರ್ಣಚಂದ್ರ ಕಾಂತಿಯಂತೆ ಇದು ಪರಿಶೋಭಿತವಾಗಿದೆ. ಅನೇಕ ರತ್ನಗಳಿಂದ ಅಲಂಕೃತವಾದ ಚಿನ್ನದ ಕಲಶಗಳಿಂದ ಈ ಛತ್ರವನ್ನು ಅಲಂಕರಿಸಲಾಗಿದೆ. ಇದರ ಸೌಂದರ್ಯವು ಮೂರು ಲೋಕಗಳನ್ನೂ ಬೆಳಗುತ್ತಿವೆ. ಹೊಳೆವ ಮುತ್ತಿನ ಜಾಲದಿಂದ ಜೋಡಿಸಲಾಗಿದೆ. ಇದನ್ನು ನೆರಳಿಗಾಗಿ ನಿನ್ನ ತಲೆಗೆ ಒಪ್ಪುವ ರೀತಿಯಲ್ಲಿ ಹಿಡಿಯುತ್ತೇನೆ. ಒಲಿದು ಸ್ವೀಕರಿಸುವವಳಾಗು.

### ೪೪. ಚಾಮರೋಪಚಾರ

ಶರದಿಂದುಮರೀಚಿಗೌರವರ್ಣೈಃ
ಮಣಿಮುಕ್ತಾವಿಲಸತ್ಸುವರ್ಣದಂಡೈಃ |
ಜಗದಂಬ ವಿಚಿತ್ರಚಾಮರೈಸ್ತ್ವಾಂ
ಅಹಮಾನಂದಭರೇಣ ವೀಜಯಾಮಿ || ||೪೪||

ಹೇ ಸ್ವಪ್ರಕಾಶಾತ್ಮರೂಪಿಣಿ, ಶರತ್ಕಾಲದ ಬೆಳದಿಂಗಳಿನಂತೆ ಬೆಳ್ಳಗಿರುವ ನವಮಣಿಗಳಿಂದ ಅಲಂಕೃತವಾಗಿರುವ ಚಿನ್ನದ ಹಿಡಿಯಿಂದ ಕೂಡಿರುವ ಚಿತ್ರ

ವಿಚಿತ್ರವಾದ ರಮ್ಯವಾದ ಚಿತ್ರಗಳಿಂದ ಕೂಡಿದ ಚಾಮರದಿಂದ ನಿನಗೆ ಗಾಳಿ ಬೀಸುತ್ತೇನೆ. ನನ್ನ ಉಪಚಾರವನ್ನು ಸ್ವೀಕರಿಸುವವಳಾಗು.

೪೫. ಮುಕುರೋಪಚಾರ

ಮಾರ್ತಾಂಡಮಂಡಲನಿಭೋ ಜಗದಂಬ ಯೋಽಯಂ
ಭಕ್ತ್ಯಾ ಮಯಾ ಮಣಿಮಯೋ ಮುಕುರೋಽರ್ಪಿತಸ್ತೇ |
ಪೂರ್ಣೇಂದುಬಿಂಬರುಚಿರಂ ವದನಂ ಸ್ವಕೀಯ
ಮಸ್ಮಿನ್ ವಿಲೋಕಯ ವಿಲೋಲವಿಲೋಚನೇ ತ್ವಮ್ || ||೪೫||

ಹೇ ಲೋಕಮಾತೇ, ಸೂರ್ಯಮಂಡಲಸದೃಶವಾದ ನವಮಣಿಗಳಿಂದ ಅಲಂಕೃತವಾದ ಕನ್ನಡಿಯನ್ನು ನಿನಗೆ ಅರ್ಪಿಸುತ್ತಿದ್ದೇನೆ. ಚಂಚಲಾಕ್ಷಿಯಾದ ನೀನು ಈ ವಿಶಾಲವಾದ ಕನ್ನಡಿಯಲ್ಲಿ ನಿನ್ನ ಮುಖಾರವಿಂದವನ್ನು ನೋಡುವವಳಾಗು.

೪೬. ಸಹಸ್ರನೀರಾಜನೋಪಚಾರ

ಇಂದ್ರಾದಯೋನತಿನತೈರ್ಮುಕುಟಪ್ರದೀಪೈ -
ರ್ನೀರಾಜಯಂತಿ ಸತತಂ ತವ ಪಾದಪೀಠಮ್ |
ತಸ್ಮಾದಹಂ ತವ ಸಮಸ್ತಶರೀರಮೇತ
ನ್ನೀರಾಜಯಾಮಿ ಜಗದಂಬ ಸಹಸ್ರದೀಪೈಃ || ||೪೬||

ಹೇ ಸರ್ವಶಕ್ತಿಸ್ವರೂಪಳೆ, ಇಂದ್ರಾದಿದೇವತೆಗಳು ತಮ್ಮ ಕಿರೀಟಯುಕ್ತ ಶಿರಗಳಿಂದ ಸದಾ ನಿನಗೆ ನಮಸ್ಕರಿಸುತ್ತಿರುತ್ತಾರೆ. ಆ ಕಿರೀಟಗಳಲ್ಲಿ ಬಿಗಿದಿರುವ ರತ್ನಗಳ ಪ್ರಭೆಯಿಂದಾಗಿ ಅವು ಸಹಸ್ರ ನೀರಾಜನದಂತೆ ಕಂಗೊಳಿಸುತ್ತವೆ. ಆದುದರಿಂದ ಮಂಗಳಮೂರ್ತಿಯಾದ ನಿನ್ನ ಪಾದಗಳಿಗೆ ಸಹಸ್ರದೀಪದ ನೀರಾಜನ ಉಪಚಾರ ಮಾಡುತ್ತಿದ್ದೇನೆ. ಒಪ್ಪಿ ಸ್ವೀಕರಿಸಿ ನಮ್ಮನ್ನು ಉದ್ಧಾರ ಮಾಡುವವಳಾಗು.

೪೭. ವಾಹನೋಪಚಾರ

ಪ್ರಿಯಗತಿರತಿತುಂಗೋ ರತ್ನಪಲ್ಯಾಣಯುಕ್ತಃ
ಕನಕಮಯವಿಭೂಷಃ ಸ್ನಿಗ್ಧಗಂಭೀರಘೋಷಃ ||
ಭಗವತಿ ಕಲಿತೋಽಯಂ ವಾಹನಾರ್ಥಂ ಮಯಾ ತೇ
ತುರಗಶತಸಮೇತೋ ವಾಯುವೇಗಸ್ತುರಂಗಃ || ||೪೭||

ಹೇ ಬ್ರಹ್ಮ, ವಿಷ್ಣು, ಶಿವಾತ್ಮರೂಪಿಣಿ, ನಿನ್ನ ಮನಸ್ಸನ್ನು ಅನುಸರಿಸಿ ವೇಗವಾಗಿ ಓಡುವ, ಅತಿ ಉತ್ತಮವಾದ, ರತ್ನಾಭರಣದಿಂದ ಕೂಡಿದ ಪೀಠವನ್ನು ಹೊಂದಿರುವ ಸುವರ್ಣಮಯ ಆಭರಣಗಳಿಂದ ಅಲಂಕೃತವಾದ, ಗಂಭೀರವಾದ ನಡಗೆಯಿಂದ

## ೪೮. ಗಜೋಪಚಾರ

ಮಧುಕರವೃತಕುಂಭನ್ಯಸ್ತಸಿಂಧೂರರೇಣುಃ
ಕನಕಕಲಿತಘಂಟಾಕಿಂಕಿಣೀಶೋಭಿಕಂಠಃ |
ಶ್ರವಣಯುಗಲಚಂಚಚ್ಚಾಮರೋ ಮೇಘತುಲ್ಯೋ
ಜನನಿ ತವಮುದೇ ಸ್ಯಾನ್ಮತ್ತಮಾತಂಗ ಏಷಃ || ||೪೮||

ಹೇ ಗಜಗಮನೆ, ದುಂಬಿಗಳಿಂದ ಆವೃತವಾದ ಕುಂಭ ಸ್ಥಳದಲ್ಲಿ ಸಿಂಧೂರ ರಜವುಳ್ಳದ್ದಾಗಿದೆ. ಕೊರಳಿನಲ್ಲಿ ಚಿನ್ನದ ಸಣ್ಣ ಘಂಟೆಗಳನ್ನು ಧರಿಸಿದೆ. ಚಾಮರದಂತೆ ಬೀಸುವ ವಿಸ್ತಾರವಾದ ಕಿವಿಗಳಿವೆ. ಕಪ್ಪಾದ ಮೋಡದಂತೆ ರಂಜಿಸುವ ಈ ಮದಿಸಿದ ಆನೆಯನ್ನು ನಿನ್ನ ಸಂಚಾರಕ್ಕಾಗಿ ಒಪ್ಪಿಸಿರುತ್ತೇನೆ. ಸ್ವೀಕರಿಸುವವಳಾಗು.

## ೪೯. ಸುವರ್ಣರಥೋಪಚಾರ

ದ್ರುತತರತುರಗೈರ್ವಿರಾಜಮಾನಂ
ಮಣಿಮಯಚಕ್ರಚತುಷ್ಟಯೇನ ಯುಕ್ತಮ್ |
ಕನಕಮಯಮಮುಂ ವಿತಾನವಂತಂ
ಭಗವತಿ ತೇ ಹಿ ರಥಂ ಸಮರ್ಪಯಾಮಿ || ||೪೯||

ಹೇ ಸುರವಂದ್ಯೇ, ವೇಗವಾಗಿ ಓಡುವ ಕುದುರೆಗಳಿಂದ ರಾರಾಜಿಸುವ ಮಣಿಮಯವಾದ ನಾಲ್ಕು ಚಕ್ರಗಳಿಂದ ಕೂಡಿದ ಚಿನ್ನದ ಮಾಡನ್ನು ಹೊಂದಿರುವ ಸುವರ್ಣರಥವನ್ನು ನಿನಗೆ ಒಪ್ಪಿಸುತ್ತೇನೆ. ಹೇ ಭಗವತೀ, ನೀನು ಇದನ್ನು ಸ್ವೀಕರಿಸಿ ನಮ್ಮನ್ನು ಉದ್ಧಾರ ಮಾಡುವವಳಾಗು.

## ೫೦. ಚತುರಂಗಸೈನ್ಯೋಪಚಾರ

ಹಯಗಜರಥ ಪತ್ತಿಶೋಭಮಾನಂ
ದಿಶಿ ದಿಶಿ ದುಂದುಭಿಮೇಘನಾದಯುಕ್ತಮ್ |
ಅತಿ ಬಹುಚತುರಂಗಸೈನ್ಯಮೇತತ್
ಭಗವತಿ ಭಕ್ತಿಭರೇಣ ತೇಽರ್ಪಯಾಮಿ || ||೫೦||

ಹೇ ಶಂಕರಾತ್ಮಜೆ, ಕುದುರೆ, ಆನೆ, ರಥ, ಕಾಲಾಳುಗಳಿಂದ ಕೂಡಿರುವ ಚತುರಂಗ ಸೈನ್ಯವನ್ನು ನಿನಗೆ ಸಮರ್ಪಿಸುತ್ತೇನೆ. ಆ ಸೈನ್ಯವಾದರೋ, ದುಂದುಭಿ ಘೋಷ

ಮಾಡುತ್ತಿರುವುದರಿಂದ ನಿನ್ನ ಕೀರ್ತಿಯು ದಶ ದಿಕ್ಕುಗಳಿಗೂ ಪಸರಿಸಿದೆ. ಅಂತಹ ಸೈನ್ಯವನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ನಿನ್ನ ಧವಳಕೀರ್ತಿಯು ಎಲ್ಲೆಡೆಯೂ ಹರಡಲಿ.

### ೫೧. ಧರಣ್ಯುಪಚಾರ

ಪರಿಧೀಕೃತಸಪ್ತಸಾಗರಂ
ಬಹು ಸಂಪತ್ಸಹಿತಂ ಮಯಾಂಬ ತೇ ವಿಪುಲಮ್ |
ಪ್ರಬಲಂ ಧರಣೀತಲಾಭಿಧಂ
ದೃಢದುರ್ಗಂ ನಿಖಿಲಂ ಸಮರ್ಪಯಾಮಿ || ||೫೧||

ಹೇ ಮಂತ್ರವ್ಯಾಖ್ಯಾನನಿಪುಣೆಯೆ, ಏಳು ಸಮುದ್ರವನ್ನು ಕಂದಕವಾಗಿರುವ, ನಾನಾ ವಿಧವಾದ ಸಂಪತ್ತುಗಳಿಂದ ಕೂಡಿದ, ಅತ್ಯಂತ ಭದ್ರವಾದ ಕೋಟೆಯಿಂದ ಆವೃತವಾಗಿರುವ ಅತ್ಯಂತ ಬಲವಾದ ದುರ್ಗದಿಂದ ಕೂಡಿದ ಈ ಮಹಾ ಭೂಮಂಡಲವನ್ನು ನಿನಗೆ ಸಮರ್ಪಿಸುತ್ತಿದ್ದೇನೆ. ಅದನ್ನು ಒಪ್ಪುವವಳಾಗು.

### ೫೨. ವೀಜೋಪಚಾರ (ಬೀಸಣಿಗೆ)

ಶತಪತ್ರಯುತೈಃ ಸ್ವಭಾವಶೀತೈಃ
ಅತಿಸೌರಭಯುತೈಃ ಪರಾಗಪೀತೈಃ |
ಭ್ರಮರೀಮುಖರೀಕೃತೈರನಂತೈಃ
ವ್ಯಜನೈಸ್ತ್ವಾಂ ಜಗದಂಬ ವೀಜಯಾಮಿ || ||೫೨||

ಹೇ ಸಹಸ್ರದಳನೇತ್ರೆ, ನೂರು ಹೂವುಗಳಿಂದ ಅಲಂಕೃತವಾದ, ಗಾಳಿ ಬೀಸುವಾಗ ತಂಪನ್ನು ತರುವ, ಸುಗಂಧಭರಿತವಾದ, ಪರಾಗದ ಮದದಿಂದ ಸುತ್ತುವ ದುಂಬಿಗಳಿಂದ ಆವೃತವಾದ ಸುಂದರವಾದ ಬೀಸಣಿಗೆಯನ್ನು ಸಮರ್ಪಿಸುತ್ತಿದ್ದೇನೆ. ಸ್ವೀಕರಿಸುವವಳಾಗು.

### ೫೩. ನರ್ತನೋಪಚಾರ

ಭ್ರಮರಲುಲಿತಲೋಲಕುಂತಲಾಲೀ
ವಿಗಲಿತಮಾಲ್ಯವಿಕೀರ್ಣರಂಗಭೂಮಿಃ |
ಇಯಮತಿರುಚಿರಾನಟೀನಟಂತೀ
ತವ ಹೃದಯೇ ಮುದಮಾತನೋತು ಮಾತಃ || ||೫೩||

ಹೇ ಸಪ್ತಮಾತೃಕೆ, ನಿನ್ನೆದುರು ಸುಂದರವಾದ ಈ ರಂಗಭೂಮಿಯಲ್ಲಿ ನರ್ತಕಿಯರು ನಟನ ಮಾಡುತ್ತಿರುವರು. ತಲೆಯಲ್ಲಿರುವ ಹೂವುಗಳ ಸುಗಂಧವಾಸನೆಯಿಂದಾಗಿ ದುಂಬಿಗಳು ಅಲ್ಲಿ ಆವೃತವಾಗಿವೆ. ಇಂತಹ ಸುಗಂಧ ಭರಿತ ಹೂವುಗಳು ನರ್ತಕಿಯರ ಕುಣಿತದಿಂದಾಗಿ ನೆಲವನ್ನು ಆವರಿಸುತ್ತಿವೆ. ಆ

## ೫೪. ನಟನೋಪಚಾರ

ಮುಖನಯನವಿಲಾಸಲೋಲವೇಣೀ
ವಿಲಸಿತನಿರ್ಜಿತಲೋಲಭೃಂಗಮಾಲಾಃ |
ಯುವಜನಸುಖಕಾರಿಚಾರುಲೀಲಾ
ಭಗವತಿ ತೇ ಪುರತೋ ನಟಂತಿ ಬಾಲಾಃ || ||೫೪||

ಹೇ ಬ್ರಾಹ್ಮಿ ಅವತಾರಿಣಿಯೇ, ಮುಖ, ಕಣ್ಣುಗಳಲ್ಲಿ ಹಾವ ಭಾವಗಳನ್ನು ತೋರುತ್ತಾ, ಹೆಣೆದಿರುವ ಜಡೆಯಲ್ಲಿ ಮುಡಿದಿರುವ ಹೂಗಳನ್ನು ಆಘ್ರಾಣಿಸಲು ವೇಗವಾಗಿ ಬರುತ್ತಿರುವ ದುಂಬಿಗಳ ಸಾಲನ್ನು ಗೆದ್ದಿರುವ, ಯುವಜನರ ಮನಸ್ಸನ್ನು ಗೆದ್ದಿರುವ, ಮನೋಹರವಾದ ಬಾಲೆಯರು ತಾಯಿ ನಿನ್ನ ಎದುರಿನಲ್ಲಿ ನಟಿಸುತ್ತಿದ್ದಾರೆ. ನೀನು ಈ ಮನಮೋಹನನಟನೆಯನ್ನು ನೋಡಿ ಮೋಹ ಗೊಳ್ಳುವವಳಾಗು.

## ೫೫. ಗಾಯನೋಪಚಾರ

ಭ್ರಮದಲಿಕುಲತುಲ್ಯಾಲೋಲಧಮ್ಮಿಲ್ಲಭಾರಾಃ
ಸ್ಮಿತಮುಖಕಮಲೋದ್ಯದ್ದಿವ್ಯಲಾವಣ್ಯಪೂರಾಃ |
ಅನುಪಮಿತಸುವೇಷಾವಾರಯೋಷಾ ನಟಂತಿ
ಪರಭೃತಕಲಕಂಠ್ಯೋ ದೇವಿ ದೈನ್ಯಂ ಧುನೋತು || ||೫೫||

ಹೇ ಮಾಹೇಶ್ವರಿರೂಪಿಣಿಯೆ, ಅಸದೃಶವಾದ ಸುಂದರ ವೇಷವುಳ್ಳ ಲೋಲೆಯರು, ನರ್ತಿಸುತ್ತಿದ್ದಾರೆ. ಅವರ ಕೇಶಗಳು ಕಪ್ಪಾಗಿದ್ದು ಚಂಚಲವಾದ ದುಂಬಿಯಂತೆ ಕಾಣುತ್ತದೆ. ಕಮಲದಂತಹ ಮುಖದಲ್ಲಿ ಮುಗುಳ್ನಗೆ ತುಂಬಿ ಲಾವಣ್ಯವು ವಿಜೃಂಭಿಸುತ್ತಿದೆ. ಈ ಬಾಲೆಯರು ಮನಮೋಹಕವಾಗಿ ಹಾಡುತ್ತಿದ್ದಾರೆ. ಇಂತಹ ಇಂಪಾದ ಗಾಯನವನ್ನು ಲಾಲಿಸುವವಳಾಗು.

## ೫೬. ವಾದ್ಯೋಪಚಾರ

ಡಮರುಡಿಂಡಿಮಜರ್ಝರಝಲ್ಲರೀ
ಮೃದುರವದ್ರಗಡದ್ದ್ರಗಡಾದಯಃ |
ಝಟಿತಿ ಝಾಂಕೃತ ಝಾಂಕೃತ ಝಾಂಕೃತೈ |
ರ್ಬಹುದಯಂ ಹೃದಯಂ ಸುಖಯಂತು ತೇ || ||೫೬||

ಸುಖಿಗೊಳಿಸಲಿ.

### ೫೭. ಸಪ್ತಸ್ವರೋಪಚಾರ

ವಿಪಂಚೀಷು ಸಪ್ತಸ್ವರಾನ್ವಾದಯಂತ್ಯ –
ಸ್ತವ ದ್ವಾರೇ ಗಾಯಂತಿ ಗಂಧರ್ವಕನ್ಯಾಃ |
ಕ್ಷಣಂ ಸಾವಧಾನೇನ ಚಿತ್ತೇನ ಮಾತಃ
ಸಮಾಕರ್ಣಯ ತ್ವಂ ಮಯಾ ಪ್ರಾರ್ಥಿತಾಸಿ || ||೫೭||

ಹೇ ವೈಷ್ಣವಿ, ಗಂಧರ್ವ ಕನ್ಯೆಯರು ಬಾಗಿಲಿನಲ್ಲಿ ನಿಂತು ಸಪ್ತ ಸ್ವರಗಳಿಂದ ನಿನ್ನ ಗಾನ ಮಾಡುತ್ತಿದ್ದಾರೆ. ತಾಯೇ ನಾನು ನಿನ್ನನ್ನು ಪ್ರಾರ್ಥಿಸುತ್ತಿದ್ದೇನೆ ಏಕಾಗ್ರ ಮನಸ್ಸಿನಿಂದ ಕೇಳುವ ಕೃಪೆಮಾಡು.

### ೫೮. ಗೀತೋಪಚಾರ

ಅಭಿನಯಕಮನೀಯೈಃ ನರ್ತನೈರ್ನರ್ತಕೀನಾಂ
ಕ್ಷಣಮಪಿ ರಮಯಿತ್ವಾ ಚೇತ ಏತತ್ವದೀಯಮ್ |
ಸ್ವಯಮಹಮತಿಚಿತ್ರೈರ್ನೃತ್ತವಾದಿತ್ರಗೀತೈಃ
ಭಗವತಿ ಭವದೀಯಂ ಮಾನಸಂ ರಂಜಯಾಮಿ || ||೫೮||

ಹೇ ವಾರಾಹಿ, ಅಭಿನಯಚತುರೆಯರು ನರ್ತನಮಾಡುವನರ್ತಕಿಯರು ಕ್ಷಣವೂ ವಿಶ್ರಾಂತಿಪಡೆಯದೆ ರಂಜಿಸುತ್ತಿದ್ದಾರೆ. ನೃತ್ಯವಾದ್ಯಗಳಿಂದಲೂ, ಗೀತೆಗಳಿಂದಲೂ ನಿನ್ನ ಮನಸ್ಸನ್ನು ರಂಜಿಸುತ್ತಿದ್ದಾರೆ . ಸ್ವೀಕರಿಸುವವಳಾಗು.

### ೫೯. ಸ್ತುತ್ಯುಪಚಾರ

ತವ ದೇವಿ ಗುಣಾನುವರ್ಣನೇ
ಚತುರಾ ನೋ ಚತುರಾನನಾದಯಃ |
ತದಿಹೈಕಮುಖೇಷು ಜಂತುಷು
ಸ್ತವನಂ ಕಸ್ತವಕ ರ್ತುಮೀಶ್ವರಃ || ||೫೯||

ಹೇ ಇಂದ್ರಾಣಿಯೆ, ನಿನ್ನ ಗುಣಗಾನ ಮಾಡಲು ಚತುರ್ಮುಖನಾದ ಬ್ರಹ್ಮಮೊದಲಾದವರಿಂದಲೇ ಸಾಧ್ಯವಾಗಲಿಲ್ಲವೆಂದ ಮೇಲೆ ಏಕಮುಖವುಳ್ಳವರು

ಪದೇ ಪದೇ ಯತ್ಪರಿಪೂಜಕೇಭ್ಯಃ
ಸದ್ಯೋऽಶ್ವಮೇಧಾದಿಫಲಂ ದದಾತಿ |
ತತ್ಸರ್ವಪಾಪಕ್ಷಯಹೇತುಭೂತಂ
ಪ್ರದಕ್ಷಿಣಂ ತೇ ಪರಿತಃ ಕರೋಮಿ || ||೬೦||

ಹೇ ಚಾಮುಂಡಾಂಬಿಕೆಯೆ, ಪದೇ ಪದೇ ನಿನ್ನನ್ನು ಪೂಜೆ ಮಾಡುವವರಿಗೆ ಅಶ್ವಮೇಧಯಾಗದ ಫಲವನ್ನು ನೀಡುವವಳಾಗಿರುತ್ತೀಯೆ, ಆದುದರಿಂದ ಸಕಲ ಪಾಪಗಳನ್ನು ದೂರಮಾಡಲು ಮುಖ್ಯ ಕಾರಣವಾದ ಪ್ರದಕ್ಷಿಣೆಯನ್ನು ನಿನ್ನ ಸುತ್ತಲೂ ಮಾಡುತ್ತಿದ್ದೇನೆ. ಒಪ್ಪುವವಳಾಗು.

೬೧. ನಮಸ್ಕಾರೋಪಚಾರ

ರಕ್ತೋತ್ಪಲಾರಕ್ತಲತಾಪ್ರಭಾಭ್ಯಾಂ
ಧ್ವಜೋರ್ಧ್ವರೇಖಾಕುಲಿಶಾಂಕಿತಾಭ್ಯಾಮ್ |
ಅಶೇಷವೃಂದಾರಕವಂದಿತಾಭ್ಯಾಂ
ನಮೋ ಭವಾನೀ ಪದ ಪಂಕಜಾಭ್ಯಾಂ || ||೬೧||

ಹೇ ಸಪ್ತಚೇತನವೆ ಕೆಂದಾವರೆಯಂತೆ ಮೋಹಕವಾಗಿ ರಂಜಿಸುವ ಬಳ್ಳಿಗಳೂ, ಕಂಗೊಳಿಸುವ ಧ್ವಜಗಳೂ, ಊರ್ಧ್ವರೇಖೆಗಳು, ಕಲಶ ಮೊದಲಾದ ಆಯುಧಗಳಿಂದ ಅಂಕಿತವಾದ, ಸಮಸ್ತ ದೇವತೆಗಳಿಂದಲೂ ಪೂಜಿಸಲ್ಪಡುವ, ಹೇ ಭವಾನಿ, ನಿನ್ನ ಎರಡೂ ಪಾದಗಳನ್ನೂ ವಂದಿಸುತ್ತೇನೆ.

೬೨. ಪ್ರಾರ್ಥನೋಪಚಾರ

ಚರಣನಲಿನಯುಗ್ಮಂ ಪಂಕಜೈಃ ಪೂಜಯಿತ್ವಾ
ಕನಕಕಮಲಮಾಲಾಂ ಕಂಠದೇಶೇऽರ್ಪಯಿತ್ವಾ |
ಶಿರಸಿ ವಿನಿಹಿತೋऽಯಂ ರತ್ನಪುಷ್ಪಾಂಜಲಿಸ್ತೇ
ಹೃದಯಕಮಲಮಧ್ಯೇ ದೇವಿ ಹರ್ಷಂ ತನೋತು || ||೬೨||

ಹೇ ಸಪ್ತಾವತಾರಿಣಿಯೆ, ನಿನ್ನ ಎರಡೂ ಪಾದಗಳನ್ನು ಕಮಲಗಳಿಂದ ಪೂಜಿಸುತ್ತೇನೆ. ನಿನ್ನ ಕುತ್ತಿಗೆಗೆ ಸ್ವರ್ಣಕಮಲದ ಮಾಲಿಕೆಯನ್ನು ಸಮರ್ಪಿಸುತ್ತೇನೆ. ಮುಡಿಗೆ ಅಲಂಕರಿಸಲು ರತ್ನಪುಷ್ಪಮಾಲೆಯನ್ನು ತಂದಿರುತ್ತೇನೆ. ನನ್ನ ಹೃದಯ ಕಮಲವನ್ನು ಆನಂದ ಪಡಿಸುವವಳಾಗು.

೬೩. ಸುವರ್ಣಭವನೋಪಚಾರ

ಅಥ ಮಣಿಮಯಮಂಚಕಾಭಿರಾಮೇ
ಕನಕಮಯವಿತಾನರಾಜಮಾನೇ |
ಪ್ರಸರದಗರುಧೂಪಧೂಪಿತೇಽಸ್ಮಿನ್
ಭಗವತಿ ಭವನೇಽಸ್ತು ತೇ ನಿವಾಸಃ || ||೬೩||

ಹೇ ಸಪ್ತಸುಪ್ತಶಕ್ತಿಯೆ, ಮಣಿಮಯವಾದ ಮಂಚದಿಂದ ಮನೋಹರವಾಗಿರುವ, ಸ್ವರ್ಣಮಯವಾದ ಮಾಡನ್ನು ಹೊಂದಿರುವ, ಅಗರು ಧೂಪಗಳಿಂದ ಸುವಾಸಿತವಾಗಿರುವ ಈ ಭವನವನ್ನು ನಿನಗೆ ಅರ್ಪಿಸುತ್ತೇನೆ. ಅಲ್ಲಿ ನೀನು ನೆಲೆಸುವವಳಾಗು.

೬೪. ಪುನಃ ಪ್ರಾರ್ಥನೋಪಚಾರ

(ಅ) ಏತಸ್ಮಿನ್ ಮಣಿಖಚಿತೇ ಸುವರ್ಣಪೀಠೇ
ತ್ರೈಲೋಕ್ಯಾಭಯವರದೌ ನಿಧಾಯ ಹಸ್ತೌ |
ವಿಸ್ತೀರ್ಣೇ ಮೃದುಲತರೋತ್ತರಚ್ಛದೇಽಸ್ಮಿನ್
ಪರ್ಯಂಕೇ ಕನಕಮಯೇ ನಿಷೀದ ಮಾತಃ || ||೬೪||

ಹೇ ದೇವಿಯೆ, ಈ ಮಣಿಖಚಿತವಾದ ಸ್ವರ್ಣಪೀಠದಲ್ಲಿ ಮೂರು ಲೋಕಗಳಿಗೂ ಅಭಯ ಮತ್ತು ವರವನ್ನು ಕೊಡುವ ಎರಡು ಕೈಗಳನ್ನೂ ಇರಿಸಿಕೊಂಡು ಮೃದುವಾದ ಮೇಲು ಹೊದಿಕೆಯಿಂದ ಕೂಡಿದ ಈ ಸಿಂಹಾಸನದಲ್ಲಿ ಮಂಡಿಸಿ ನಮ್ಮನ್ನು ಉದ್ಧಾರ ಮಾಡುವವಳಾಗು .

(ಆ) ತವ ದೇವಿ ಸರೋಜಚಿಹ್ನಯೋಃ
ಪದಯೋಃ ನಿರ್ಜಿತಪದ್ಮರಾಗಯೋಃ |
ಅತಿರಕ್ತತರೈರಲಕ್ತಕೈಃ
ಪುನರುಕ್ತಾಂ ರಚಯಾಮಿ ರಕ್ತತಾಮ್ || ||೬೫||

ಪದ್ಮರಾಗಮಣಿಗಳಿಗಿಂತಲೂ ಕೆಂಪಾಗಿರುವ ನಿನ್ನ ಪಾದಕಮಲಗಳನ್ನು ಮತ್ತಷ್ಟು ಮೃದುಗೊಳಿಸಿ ಕಂಪು ಮಾಡುವವಳಾಗು.

(ಇ) ಅಥ ಮಾತರುಶೀರವಾಸಿತಂ
ನಿಜತಾಂಬೂಲರಸೇನ ರಂಜಿತಮ್ |
ತಪನೀಯಮಯೇ ಹಿ ಪಟ್ಟಕೇ
ಮುಖಗಂಡೂಷಜಲಂ ವಿಧೀಯತಾಮ್ || ||೬೬||

(ಈ) [illegible]

ಮೃದುತಲತೂಲಿಕಯಾ ವಿರಾಜಮಾನೇ |
ಅತಿರಹಸಿ ಮುದಾ ಶಿವೇನ ಸಾರ್ಧಂ
ಸುಖಶಯನಂ ಕುರು ತತ್ರ ಮಾಂ ಸ್ಮರಂತಿ || ||೬೭||

ಜಗನ್ಮಾತೆ ನಿಮಗಾಗಿ ಮೃದುವಾದ ತೂಗುಯ್ಯಾಲೆಯಾಡುವ ಮಂಚವನ್ನು ತಯಾರಿಸಿರುತ್ತೇನೆ. ಪರಶಿವನೊಂದಿಗೆ ಸುಖವಾಗಿ ನಿದ್ರಿಸುತ್ತಾ ಏಕಾಂತದಲ್ಲಿ ವಿಶ್ರಾಂತಿ ಪಡೆಯುವವಳಾಗು. ಅಲ್ಲಿ ನನ್ನನ್ನು ನೆನೆಸಿಕೊಳ್ಳುವ ಕೃಪೆ ಮಾಡು.

(ಉ) ಮುಕ್ತಾಕುಂದೇಂದುಗೌರಾಂ ಮಣಿಮಯಮಕುಟಾಂ ರತ್ನತಾಟಂಕಯುಕ್ತಾಮ್
ಅಕ್ಷ ಸ್ರಕ್ಪುಷ್ಪಹಸ್ತಾಮಭಯವರಕರಾಂ ಚಂದ್ರಚೂಡಾಂ ತ್ರಿನೇತ್ರಾಮ್ |
ನಾನಾಲಂಕಾರಯುಕ್ತಾಂ ಸುರಮಕುಟಮಣಿದ್ಯೋತಿತಸ್ವರ್ಣಪೀಠಾಂ
ಸಾನಂದಾಂ ಸುಪ್ರಸನ್ನಾಂ ತ್ರಿಭುವನಜನನೀ ಚೇತಸಾ ಚಿಂತಯಾಮಿ || ||೬೮||

ಮುತ್ತುಗಳು, ಕುಂದಪುಷ್ಪದಿಂದ ಅಲಂಕೃತಳಾಗಿ ಚಂದ್ರನ ಕಾಂತಿಯಂತೆ ಬೆಳ್ಳಗಿರುವ ಮಣಿಮಯವಾದ ಕಿರೀಟವನ್ನು ಧರಿಸಿರುವ, ಕಿವಿಯಲ್ಲಿ ರತ್ನದ ಓಲೆಗಳಿಂದ ಕಾಂತಿಯುತವಾಗಿರುವ ದೇವಿಯೇ, ಅಕ್ಷಮಾಲೆ, ಹೂವು, ಅಭಯ ಹಸ್ತದಿಂದ ನಿಂತಿರುವವಳೇ, ತಲೆಯಲ್ಲಿ ಚಂದ್ರನನ್ನು ಧರಿಸಿರುವ ಮೂರು ಕಣ್ಣಗಳುಳ್ಳ, ಅನೇಕ ಅಲಂಕಾರಗಳನ್ನು ಮಾಡಿಕೊಂಡಿರುವ ಕಿರೀಟಗಳನ್ನು ಧರಿಸಿಕೊಂಡು, ನಿನ್ನ ಪಾದಗಳಿಗೆ ನಮಸ್ಕರಿಸುವ ಅವರ ಕಿರೀಟ ಮಣಿಗಳ ಕಾಂತಿಯಿಂದ ತುಂಬಿರುವ ಸ್ವರ್ಣಪೀಠವುಳ್ಳ, ಆನಂದಿತಳಾಗಿರುವ ಪ್ರಸನ್ನಳಾದ, ಮೂರುಲೋಕಕ್ಕೂ ತಾಯಿಯಾದ ನಿನ್ನನ್ನು ಮನಸ್ಸಿನಲ್ಲಿ ಧ್ಯಾನಿಸುತ್ತೇನೆ.

(ಊ) ಏಷಾ ಭಕ್ತ್ಯಾ ತವ ವಿರಚಿತಾ ಯಾ ಮಯಾ ದೇವಿ ಪೂಜಾ
ಸ್ವೀಕೃತ್ಯೈನಾಂ ಸಪದಿ ಸಕಲಾನ್ಮೇಽಪರಾಧಾನ್ ಕ್ಷಮಸ್ವ |
ನ್ಯೂನಂ ಯತ್ತತ್ತವ ಕರುಣಯಾ ಪೂರ್ಣತಾಮೇತು ಸದ್ಯಃ
ಸಾನಂದಂ ಮೇ ಹೃದಯ ಕಮಲೇ ತೇಽಸ್ತು ನಿತ್ಯಂ ನಿವಾಸಃ || ||೬೯||

ದೇವಿ ಭಕ್ತಿಯಿಂದ ನಿನ್ನ ಪೂಜೆಯನ್ನು ಯಥಾವಿಧಿ ನೆರವೇರಿಸಿರುತ್ತೇನೆ. ಇದನ್ನು ಕೂಡಲೇ ಸ್ವೀಕರಿಸಿ ನನ್ನ ಎಲ್ಲಾ ಅಪರಾಧಗಳನ್ನೂ ಕ್ಷಮಿಸು. ನಾನು ಯಾವ ಕೆಲಸವನ್ನು ಮಾಡಲು ಉದ್ಯುಕ್ತನಾಗುವೆನೋ, ಅವೆಲ್ಲವೂ ಪರಿಪೂರ್ಣತೆಯನ್ನು ಪಡೆಯುವಂತಾಗಲಿ, ನನ್ನ ಹೃದಯಕಮಲದಲ್ಲಿ ಸದಾ ನೆಲೆಸುವವಳಾಗು.

ಫಲಶ್ರುತಿ

ಪೂಜಾಮಿಮಾಂ ಯಃ ಪಠತಿ ಪ್ರಭಾತೇ
ಮಧ್ಯಾಹ್ನಕಾಲೇ ಯದಿ ವಾ ಪ್ರದೋಷೇ |
ಧರ್ಮಾರ್ಥಕಾಮಾನ್ಪುರುಷೋಽಭ್ಯುಪೈತಿ
ದೇಹಾವಸಾನೇ ಶಿವಭಾವಮೇತಿ || ||೭೦||

ಈ ಪೂಜಾವಿಧಿಯನ್ನು ಯಾರು ಬೆಳಗ್ಗೆ ಮದ್ಯಾಹ್ನ ಅಥವ ಪ್ರದೋಷ ಕಾಲದಲ್ಲಿ ಪಠಿಸುತ್ತಾರೋ ಅವರು ಧರ್ಮಾರ್ಥಕಾಮಗಳೆಂಬ ಮೂರು ಪುರುಷಾರ್ಥಗಳನ್ನು ಪಡೆಯುವವರಾಗುತ್ತಾರೆ. ದೇಹಾವಸಾನದ ಅನಂತರ ಶಿವ ಸಾಯುಜ್ಯವನ್ನು ಪಡೆಯುವರು.

ಪೂಜಾಮಿಮಾಂ ಪಠೇನ್ನಿತ್ಯಂ ಪೂಜಾಂ ಕರ್ತುಮನೀಶ್ವರಃ |
ಪೂಜಾಫಲಮವಾಪ್ನೋತಿ ವಾಂಛಿತಾರ್ಥಂ ಚ ವಿಂದತಿ. || ||೭೧||

ನಿನ್ನನ್ನು ಪೂಜಿಸಲು ಆಗದಿದ್ದರೂ ಈ ಪೂಜಾವಿಧಿಯನ್ನು ಸದಾ ಪಠಿಸುತ್ತಾರೋ ಅವರು ಪೂಜಾಫಲವನ್ನು ಹೊಂದುತ್ತಾರೆ. ಅವರು ತಮ್ಮ ಮನಸ್ಸಿನ ಅಭಿಲಾಷೆಗಳನ್ನು ಪಡೆಯುವವರಾಗುತ್ತಾರೆ.

ಪ್ರತ್ಯಹಂ ಭಕ್ತಿಸಂಯುಕ್ತೋ ಯಃ ಪೂಜನಮಿದಂ ಪಠೇತ್ |
ವಾಗ್ವಾದಿನ್ಯಾಃ ಪ್ರಸಾದೇನ ವತ್ಸರಾತ್ಸ ಕವಿರ್ಭವೇತ್ || ||೭೨||

ಯಾರು ಪ್ರತಿದಿನವೂ ಭಕ್ತಿಪೂರಕವಾಗಿ ಈ ಪೂಜಾಸ್ತೋತ್ರವನ್ನು ಪಠಿಸುವರೋ ಅವರು ವಾಗ್ದೇವಿಯ ಪ್ರಸಾದದಿಂದ ಒಂದು ವರ್ಷದಲ್ಲಿಯೇ ಕವಿಯಾಗುವರು.

ಇತಿ

ಶ್ರೀ ಪರಮಹಂಸ ಪರಿವ್ರಾಜಕಾಚಾರ್ಯವರ್ಯಸ್ಯ
ಶ್ರೀ ಗೋವಿಂದ ಭಗವತ್ಪೂಜ್ಯಪಾದಶಿಷ್ಯಸ್ಯ
ಶ್ರೀ ಮಚ್ಛಂಕರಭಗವತಃ ಕೃತೌ

ದೇವೀ ಚತುಃಷಷ್ಟ್ಯುಪಚಾರಪೂಜಾಸ್ತೋತ್ರಂ ಸಂಪೂರ್ಣಮ್ |

ಇತಿ ಶ್ರೀ ಮತ್ಪರಮಹಂಸಪರಿವ್ರಾಜಕಾಚಾರ್ಯ ಶ್ರೀ ಗೋವಿಂದಭಗವತ್ಪಾದ ಪೂಜ್ಯಪಾದರ ಶಿಷ್ಯರಾದ ಶ್ರೀಶಂಕರಭಗವತ್ಪಾದರಿಂದ ರಚಿಸಿದಂತಹ ದೇವೀ ಚತುಃಷಷ್ಟ್ಯುಪಚಾರಪೂಜಾಸ್ತೋತ್ರವು ಸಂಪೂರ್ಣವಾಯಿತು.*

---

* ಈ ಸ್ತೋತ್ರವನ್ನು ಶ್ರೀ ಶೃಂಗೇರಿ ಜಗದ್ಗುರುಗಳ ಆದೇಶಾನುಸಾರ ಮುದ್ರಿತವಾಗಿರುವ ತಿರುಚಿರಪಳ್ಳಿಯ ಶ್ರೀ ವಾಣೀವಿಲಾಸ ಮುದ್ರಣಾಲಯದ ಪ್ರತಿಯಿಂದ ಸಂಗ್ರಹಿಸಲಾಗಿದೆ.

ದೇವಿಯುವೇದ ಸಾಹಿತ್ಯದಲ್ಲಿ ಬಹುವಾಗಿ ವಿಜೃಂಭಿಸಿದ್ದಾಳೆ. ಋಗ್ವೇದದಲ್ಲಿ ಅದ್ಯಳೆಂದೂ, ಯಜುರ್‌ವೇದದಲ್ಲಿ ಯಜ್ಞಳೆಂದೂ, ಸಾಮವೇದದಲ್ಲಿ ಯೋಗಿನೀ ಎಂದೂ, ಅಥರ್ವಣವೇದದಲ್ಲಿ ದೇವೀ ಎಂದೂ, ಸಚ್ಚಿದಾನಂದಬ್ರಹ್ಮ ಸ್ವರೂಪಳೆಂದೂ ವರ್ಣಿತವಾಗಿರುವುದನ್ನು ಕಾಣುತ್ತೇವೆ.

ವೇದಗಳಲ್ಲಿ ಉಕ್ತವಾಗಿರುವ ಶ್ರೀ ಸೂಕ್ತ, ದೇವೀಸೂಕ್ತ ಮತ್ತು ರಾತ್ರೀ ಸೂಕ್ತ (ಋಗ್ವೇದ), ಸರಸ್ವತೀಸೂಕ್ತ (ಯಜರ್‌ವೇದ)ಗಳಲ್ಲಿ ದೇವಿಯನ್ನು ಸರ್ವತಂತ್ರ ಸ್ವತಂತ್ರಿಣೀ ಎಂದು ವರ್ಣಿಸಲಾಗಿದೆ. ಅವಳನ್ನು, ಕಾಲವನ್ನು ಧ್ವಂಸ ಮಾಡುವ ಕಾಲಹಂತ್ರೀ ಎಂದು ಸ್ತುತಿಸಲಾಗಿದೆ. ಕಾಲಿಕಾ ಮತ್ತು ತಾರಾ ಉಪನಿಷತ್ತುಗಳಲ್ಲಿ ಅವಳನ್ನು ಸರ್ವಶಕ್ತಳೆಂದು ವರ್ಣಿಸಿದ್ದಾರೆ. ದೇವೀಮಾಹಾತ್ಮ್ಯೆಯಲ್ಲಿ ಮಹಾಲಕ್ಷ್ಮೀ ಎಂದೂ, ಮಹಾಕಾಳಿ, ಮಹಾಮಾಯೆ, ಮಹಾಮಾರಿ, ಕಾಳರಾತ್ರಿ, ಎಂದು ಚಿತ್ರಿಸಿ ಮಹಾಪ್ರಳಯಕಾಲದಲ್ಲಿ ಲೋಕವನ್ನು ಉದ್ಧರಿಸುವವಳೆಂದು ವರ್ಣಿಸಿರುತ್ತಾರೆ.

ಮಹಾಭಾರತದಲ್ಲಿ ಅರ್ಜುನನು ದೇವಿಯನ್ನು ಪೂಜಿಸುವುದನ್ನು ಕಾಣುತ್ತೇವೆ. ದೇವೀ ಉಪನಿಷತ್ತಿನಲ್ಲಿ ಅವಳೇ ಬ್ರಹ್ಮವೆಂದು ವರ್ಣಿತವಾಗಿದೆ. ಪ್ರಕೃತಿ ಮತ್ತು ಪುರುಷನ ಹುಟ್ಟಿಗೆ ದೇವಿಯೇ ಕಾರಣವೆಂದು ತಿಳಿಸಲಾಗಿದೆ. ದೇವಿಯನ್ನು ಯಂತ್ರ ರೂಪದಿಂದಲೂ ತಂತ್ರ ರೂಪದಿಂದಲೂ ಪೂಜಿಸುವ ಪದ್ಧತಿಯೂ ರೂಢಿಯಲ್ಲಿದೆ. ದೇವಿಯನ್ನು ಸಂಧ್ಯೆ ಎಂದೂ, ಸಾವಿತ್ರೀ ಎಂದೂ ಸ್ತುತಿಸುವುದನ್ನು ಕಾಣುತ್ತೇವೆ.

ಕಾಳೀತಂತ್ರವು ಕಾಳಿಯನ್ನು ನಗ್ನಳಾಗಿ ವಿಶ್ವವನ್ನು ವ್ಯಾಪಿಸಿದ್ದಾಳೆ, ವಿಶ್ವವೆಲ್ಲವೂ ಅವಳೇ ಎನ್ನುವ ತತ್ತ್ವವನ್ನು ಪ್ರತಿಬಿಂಬಿಸುತ್ತದೆ. ದೇವಿಯನ್ನು ಶ್ರೀಚಕ್ರದ ರೂಪದಲ್ಲಿ ಪೂಜಿಸುವ ಪದ್ಧತಿಯೂ ಇದೆ. ಲಲಿತಾಸಹಸ್ರನಾಮದ ಪೂಜೆಯಲ್ಲಿ ಶ್ರೀಚಕ್ರಕ್ಕೆ ಬಹಳ ಸ್ಥಾನವಿದೆ. ಆಚಾರ್ಯ ಶ್ರೀ ಶಂಕರಭಗವತ್ಪಾದರು ಶ್ರೀ ಚಕ್ರವನ್ನು ಸ್ಥಾಪಿಸಿ ಅದರ ಮೇಲೆ ಶಾರದೆಯನ್ನು ಶೃಂಗೇರಿಯಲ್ಲಿ ಪ್ರತಿಷ್ಠಾಪಿಸಿರುತ್ತಾರೆ. ಅಂತೆಯೇ ಧನಾಕರ್ಷಣಯಂತ್ರವನ್ನು ವೆಂಕಟಗಿರಿಯಲ್ಲಿ ಪ್ರತಿಷ್ಠಾಪಿಸಿ ದೇವಿಯನ್ನು ಮಹಾಲಕ್ಷ್ಮೀ ರೂಪದಲ್ಲಿ ಆಹ್ವಾನಿಸಿರುತ್ತಾರೆ.

ದೇವಿಯನ್ನು ವಿಶೇಷವಾಗಿ ನವರಾತ್ರಿ, ದೀಪಾವಳಿ ಮತ್ತು ಪುಷ್ಯ ಪೂರ್ಣಿಮೆಯಲ್ಲಿ ದೇಶಾದ್ಯಂತ ಆರಾಧಿಸುತ್ತಾರೆ. ಅಶ್ವಿನಿ ಶುದ್ಧ ಪ್ರತಿಪದ ದೇವಿಯ ಪೂಜೆಗೆ ಬಹು ವಿಶೇಷವಾದ ದಿನವೆಂದು ಭಕ್ತಿಯಿಂದ ಪೂಜಿಸುತ್ತಾರೆ.

---

ಡಿ. ವರದಾಚಾರಿ ಷಡಗೋಪನ್, Worship of Mahakali, Tatvaloka, Vol . XVI , No. 4, November 1993, p. 8.

ಶೃಂಗೇರಿಯಲ್ಲಿ ನವರಾತ್ರಿಯ ದರ್ಬಾರು ನಡೆಯುತ್ತದೆ. ಆಗ ಮಹಾ ಸ್ವಾಮಿಗಳೇ, ವ್ಯಾಖ್ಯಾ ಸಿಂಹಾಸನಾರೂಢರಾಗಿರುತ್ತಾರೆ. ಅವರ ಸಾನ್ನಿಧ್ಯದಲ್ಲಿಯೇ ದುರ್ಗಾಸಪ್ತಶತಿಯ ಪಾರಾಯಣ ನಡೆದು ಅನಂತರ ಸಂಗೀತ ಸೇವೆಯಾದ ನಂತರ ಶ್ರೀ ಶಾರದೆಗೆ ಮಹಾ ಮಂಗಳಾರತಿ ಬೆಳಗಿ ಕೊನೆಯಲ್ಲಿ ಪೂರ್ಣಾಹುತಿ ನಡೆಯುತ್ತದೆ.

'ದುರ್ಗಾಸಪ್ತಶತೀ' ಪಾರಾಯಣವೆಂದರೆ ಮಾರ್ಕಡೇಯ ಪುರಾಣದಲ್ಲಿ ಅಂತರ್ಗತವಾಗಿರುವ ಸಾವರ್ಣಿಕೆ ಮನ್ವಂತರದ ವಿವರಣೆ. ಇಲ್ಲಿ ನಾವು ಕಾಣುವುದು ಸಪ್ತಮಾತೃಕೆಯರ ಅವತಾರ,' ಅವರ ದಿಗ್ವಿಜಯ, ಅವರು ರಾಕ್ಷಸರನ್ನು ಸಂಹಾರ ಮಾಡಿ ದೇವತೆಗಳನ್ನು ಉದ್ಧರಿಸಿದುದು, ದೇವತೆಗಳು ದೇವಿಯನ್ನು ವಿವಿಧ ರೀತಿಯಲ್ಲಿ ಸ್ತುತಿಸಿದುದು, ಇತ್ಯಾದಿ, ಇತ್ಯಾದಿ.

ಕಾಳಿಕಾಪುರಾಣ, ವಾಮನಪುರಾಣ, ವರಾಹಪುರಾಣ, ಮತ್ತು ಮಾರ್ಕಂಡೇಯ ಪುರಾಣಗಳಲ್ಲಿ ದೇವಿಯ ಮಾಹಾತ್ಮ್ಯೆಯನ್ನು ಬಹು ವಿಸ್ತಾರವಾಗಿ ವರ್ಣಿಸಲಾಗಿದೆ. ಮಾರ್ಕಂಡೇಯ ಪುರಾಣದಲ್ಲಿ ಉಕ್ತವಾಗಿರುವ ಹದಿಮೂರು ಅಧ್ಯಾಯಗಳನ್ನೇ ದುರ್ಗಾಸಪ್ತಶತೀ ಎಂದು ಭಕ್ತಿಯಿಂದ ಪಾರಾಯಣ ಮಾಡುವುದರಿಂದ ಆ ಭಾಗದ ಸಂಕ್ಷಿಪ್ತ ವಿವರಣೆಯನ್ನು ಮಾತ್ರ ನೀಡಲಾಗಿದೆ.

## ಮಾರ್ಕಂಡೇಯ ಪುರಾಣ

ಮಾರ್ಕಂಡೇಯಪುರಾಣ ವ್ಯಾಸಪ್ರಣೀತವಾದುದು. ಚತುರ್ವೇದಗಳನ್ನು ವಿಂಗಡಿಸಿದ ನಂತರ ಅಷ್ಟಾದಶ ಪುರಾಣಗಳನ್ನು ಬರೆದರು. ಇದರಲ್ಲಿ ಒಂದು ಮಾರ್ಕಂಡೇಯ ಪುರಾಣ. ಈ ಪುರಾಣದ ೭೮ ನೇ ಅಧ್ಯಾಯದಲ್ಲಿ ದೇವಿ ಮಾಹಾತ್ಮ್ಯೆಯು ಪ್ರಾರಂಭವಾಗುತ್ತದೆ. ಹದಿಮೂರು ಅಧ್ಯಾಯಗಳನ್ನು ದೇವಿ ಕೀರ್ತಿಯನ್ನು ಪ್ರಚುರಪಡಿಸಲು ಮೀಸಲಾಗಿಸಿರುತ್ತಾರೆ. ದೇವಿಯ ಏಳ ಅವತಾರಗಳನ್ನು ವರ್ಣಿಸಿ ಭಕ್ತ ಜನರ ಉದ್ಧಾರಕ್ಕಾಗಿ ಅನುಗ್ರಹಿಸಿರುತ್ತಾರೆ.

## ಮಹಾಕಾಲಿಕಾ ಧ್ಯಾನಮ್

ಓಂ ಖಡ್ಗಂ ಚಕ್ರಗದೇಷುಚಾಪ ಪರಿಘಾನ್ ಶೂಲಂ ಭುಶಂಡೀಂ ಶಿರಃ
ಶಂಖಂ ಸಂದಧತೀಂ ಕರೈಸ್ತ್ರಿನಯನಾಂ ಸರ್ವಾಂಗಭೂಷಾವೃತಾಮ್
ಯಾಂ ಹಂತುಂ ಮಧುಕೈಟಭೌ ಜಲಜ ಭೂ - ಸ್ತುಷ್ಟಾವ ಸುಪ್ತೇಹಶೌ
ನೀಲಾಶ್ಮದ್ಯುತಿಮಾಸ್ಯ ಪಾದದಶಕಾಂ ಸೇವೇ ಮಹಾಕಾಲಿಕಾಮ್ ||

ನೀಲಮಣಿಯಂತೆ ಸುಂದರ ರೂಪಳಾದ, ಹತ್ತು ತಲೆಗಳು ಮತ್ತು ಹತ ಪಾದಗಳನ್ನು ಹೊಂದಿರುವ, ಸರ್ವಾಭರಣಭೂಷಿತಳಾದ ಖಡ್ಗ, ಚಕ್ರ, ಗದೆ, ಬಾ ಬಿಲ್ಲು, ಪರಿಘ, ಶೂಲ, ಭುಶುಂಡಿ, ನರಶಿರಸ್ಸು, ಶಂಖ ಮೊದಲಾದವುಗಳ ಒಡಿದಿರುವ, ತ್ರಿಲೋಚನೆಯಾದ, ಯಾವ ದೇವಿಯು ಹರಿಯು ನಿದ್ರಿಸುತ್ತಿದ್ದಾ

ಸ್ವಾರೋಚಿಷವೆಂಬ ಮನ್ವಂತರದಲ್ಲಿ, ಚೈತ್ರವಂಶದಲ್ಲಿ ಹುಟ್ಟಿದ ಸುರಥನೆಂಬ ರಾಜನಿದ್ದನು. ತನ್ನ ಪ್ರಜೆಗಳನ್ನು ತನ್ನ ಔರಸ ಪುತ್ರರಂತೆ ಸಲಹುತ್ತಿದ್ದನು. [illegible] ಕೆಲವರು ಅವನ ಶತ್ರುಗಳಾದರು. ರಾಜನಿಗೆ ಅವರಿಂದ ಸೋಲುಂಟಾಯಿತು. ರಾಜನು ಶಕ್ತಿಶಾಲಿಯಲ್ಲವೆಂದು ತಿಳಿದ ಶತ್ರುಗಳು ಅವನ ರಾಜ್ಯವನ್ನು ಗೆದ್ದು ಕೊಂಡರು. ರಾಜ ಭಂಡಾರವು ಶತ್ರುಗಳ ವಶವಾಯಿತು. ರಾಜನು ರಾಜ್ಯವನ್ನು ಬಿಟ್ಟು ಕಾಡಿಗೆ ಹೋಗಬೇಕಾಯಿತು. ಅವನ ಪುಣ್ಯವಶದಿಂದ ಮುನಿಶ್ರೇಷ್ಠರ ಆಶ್ರಮವೊಂದನ್ನು ಸೇರಿದನು.

ರಾಜನು ಖಿನ್ನನಾಗಿದ್ದನು. ತನ್ನ ಹಿಂದಿನ ಭೋಗಗಳನ್ನು ಚಿಂತಿಸುತ್ತಿದ್ದನು. ತನ್ನ ಭಂಡಾರ, ತನ್ನ ಅನುಯಾಯಿಗಳೆಲ್ಲರೂ ಈಗ ಧೂರ್ತ ಶತ್ರುಗಳ ಅನುಯಾಯಿಗಳಲ್ಲವೇ ? ಎಂದು ಚಿಂತಿಸುತ್ತಿರುವಾಗಲೇ ಅಲ್ಲಿಗೆ ಒಬ್ಬ ವೈಶ್ಯನು ಬಂದನು. ಅವನೂ ಸಹ ತನ್ನ ಕುಟುಂಬದವರಿಂದ ಹೊರದೂಡಲ್ಪಟ್ಟವ ನಾಗಿದ್ದನು. ಸಮಾನಚಿಂತಕರಾದ ರಾಜನೂ ವೈಶ್ಯನೂ ಆಶ್ರಮದ ಮುನಿಗಳ ದರ್ಶನಾರ್ಥಿಗಳಾಗಿ ನಡೆದರು. ಮಹಾಮುನಿಗಳ ಮುಂದೆ ತಮ್ಮ ಪೂರ್ವ ಚರಿತ್ರೆಯನ್ನು ವಿವರಿಸಿ ತಮ್ಮ ಸಂಕಟ ಪರಿಹಾರವಾಗುವ ಮಾರ್ಗೋಪಾಯವನ್ನು ತಿಳಿಸಲು ಪ್ರಾರ್ಥಿಸಿದರು. ರಾಜನೂ, ವೈಶ್ಯನೂ ತಮ್ಮ ಸರ್ವಸುಖವನ್ನು ಕಳೆದು ಕೊಂಡಿದ್ದರೂ ತಮ್ಮ ಹೆಂಡತಿ, ಮಕ್ಕಳು, ಬಂಧುವರ್ಗ ಮತ್ತು ತಾವು ಗಳಿಸಿದ್ದ ಸಂಪತ್ತಿನ ಬಗೆಗೇ ಯೋಚಿಸುತ್ತಿದ್ದರು. ಇದನ್ನು ಗುರುತಿಸಿದ ಋಷಿಶ್ರೇಷ್ಠರು ಮಮತೆಯಲ್ಲಿ ಸಿಕ್ಕಿರುವ ಮಾನವರು ಹೇಗೆ ಮೋಹದ ಹಳ್ಳದಲ್ಲಿ ಸಿಕ್ಕಿ ಬೀಳುವರು ಎಂಬುದಕ್ಕೆ ನೀವೇ ಸರಿಯಾದ ಉದಾಹರಣೆ ಎಂದು ತಿಳಿದು ಅವರಿಗೆ "ಮೋಹ, ಮಾಯೆ"ಯಿಂದ ಹೊರಬರಲು 'ಮಾಯೆ'ಯ ರಹಸ್ಯವನ್ನು ವಿವರಿಸಿದರು.

ಮಹಾವಿಷ್ಣುವಿನ ಯೋಗನಿದ್ರೆಯೇ "ಮಾಯೆ" ಮಾಯೆಯು ಎಲ್ಲರನ್ನು ಮೋಹಗೊಳಿಸಿಬಿಡುತ್ತದೆ. ಈ ಮಹಾಮಾಯೆಯು ಸ್ತ್ರೀಶಕ್ತಿಯಾಗಿದ್ದು ಜ್ಞಾನಿಗಳ ಮನಸ್ಸನ್ನು ಕೂಡ ಬಲತ್ಕಾರದಿಂದ ಮೋಹದಲ್ಲಿ ಸಿಲುಕುವಂತೆ ಮಾಡಿ ಬಿಡುತ್ತಾಳೆ. ಈ ಚರಾಚರ ಪ್ರಾಣಿವರ್ಗಗಳಿಂದ ಈ ಜಗತ್ತು ಅವಳಿಂದ ಸೃಷ್ಟಿಸಲ್ಪಡುತ್ತದೆ. ಅವಳು ಪ್ರಸನ್ನಳಾದಾಗ ಭಕ್ತರಿಗೆ ಅವರ ಇಷ್ಟಗಳನ್ನು ನೆರವೇರಿಸುವವಳಾಗಿಯೂ, ಮುಕ್ತಿಯನ್ನು ಅನುಗ್ರಹಿಸುವವಳೂ ಆಗಿದ್ದಾಳೆ. ಮುಕ್ತಿಗೆ ಕಾರಣವಾದ ಸನಾತನ ಜ್ಞಾನವೂ ಅವಳೇ "ಸಂಸಾರದ ಸರ್ವ ಬಂಧನಕ್ಕೂ ಕಾರಣಳಾದ ಸರ್ವೇಶ್ವರಿಯೂ ಅವಳೇ", ಮುನಿಗಳ ಉಪದೇಶದಿಂದ ರಾಜನು ಮಹಾಮುನಿಗಳೇ ದೇವಿಯು

ಎಂತಹವಳು ? ಅವಳ ಸೃಷ್ಟಿ ಹೇಗಾಯಿತು, ಅವಳ ಸ್ವಭಾವವೆಂತಹದು ? ಅವಳ ಸ್ವರೂಪವೆಂತಹುದು ? ಎಂಬುದನ್ನು ವಿಸ್ತಾರವಾಗಿ ತಿಳಿಸಬೇಕೆಂದು ಪ್ರಾರ್ಥಿಸಿದನು.

ಆಗ ಕ್ರೌಷ್ಟುಕಿಮುನಿಯು ವಿವರವಾಗಿ ದೇವಿಯ ವಿವಿಧ ಶಕ್ತಿಗಳನ್ನು ವಿವರಿಸಿದರು. ದೇವಿಯು ವಿಶ್ವರೂಪಿಣಿ, ಅವಳು ನಿತ್ಯಳು, ಈ ಜಗತ್ತೆಲ್ಲವೂ ಅವಳಿಂದ ವ್ಯಾಪ್ತವಾಗಿದೆ. ಅವಳು ಯಾವಾಗ ದೇವತೆಗಳ ಕಾರ್ಯಸಿದ್ಧಿಗಾಗಿ ಅರ್ವಿಭಾವವನ್ನು ಹೊಂದುವಳೋ ಆಗ ಅವಳ ಅವತಾರವಾಯಿತೆಂದು ತಿಳಿಯಬೇಕು.

ಕಲ್ಪದ ಕೊನೆಯಾದಾಗ ಜಗತ್ತೆಲ್ಲವೂ ಜಲಮಯವಾಯಿತು. ಮಹಾವಿಷ್ಣುವು ಆದಿಶೇಷನ ಮೇಲೆ ಯೋಗನಿದ್ರೆಯಲ್ಲಿ ಲೀನನಾದನು. ಆಗ ಅವನ ಕಿವಿಯಿಂದ ಹೊರ ಬಿದ್ದ ಕಸರೂಪಿಯಾದ ವಸ್ತುವಿನಿಂದ ಮಧು ಮತ್ತು ಕೈಟಭರೆಂಬ ಇಬ್ಬರು ರಾಕ್ಷಸರು ಜನಿಸಿದರು. ಅವರು ಮಹಾಪರಾಕ್ರಮಶಾಲಿಗಳಾಗಿದ್ದು, ಮಹಾವಿಷ್ಣುವಿನ ನಾಭಿಕಮಲದಲ್ಲಿ ಆಸೀನನಾಗಿದ್ದ ಬ್ರಹ್ಮನನ್ನು ಕೊಲ್ಲಲು ಉದ್ಯುಕ್ತರಾದರು. ಆಗ ಪ್ರಜಾಪತಿಯಾದ ಬ್ರಹ್ಮನು ಪರಮಾತ್ಮನನ್ನು ಎಚ್ಚರ ಗೊಳಿಸಲೋಸುಗ ಯೋಗ ನಿದ್ರೆಯನ್ನು ಏಕಾಗ್ರ ಮನಸ್ಸಿನಿಂದ ಸ್ತುತಿಸಿದನು.

ವಿಶ್ವೇಶ್ವರೀಂ ಜಗದ್ಧಾತ್ರೀಂ ಸ್ಥಿತಿಸಂಹಾರಕಾರಣೀಮ್ |
ನಿದ್ರಾಂ ಭಗವತೀಂ ವಿಷ್ಣೋರತುಲಾಂ ತೇ ಜನಃ ಪ್ರಭುಃ ||

ಪ್ರಾಜಾಪತಿಯೂ, ವಿಶ್ವೇಶ್ವರಿಯೂ, ಜಗದೋದ್ಧಾರಕಳೂ, ಸೃಷ್ಟಿಸ್ಥಿತಿ ಸಂಹಾರಗಳಿಗೆ ಕಾರಣಳೂ, ತೇಜೋರೂಪನಾದ ವಿಷ್ಣುವಿನ ಭಗವತಿಯೂ ಆದ ಯೋಗ ನಿದ್ರೆಯನ್ನು ಸ್ತುತಿಸಿದನು. ನೀನು ಸ್ವಾಹಾ, ನೀನು ಸ್ವಧಾ, ನೀನೇ ವಷಟ್ಕಾರ, ಸ್ವರ್ಗ ಲೋಕರೂಪಳೂ ನೀನೇ, ನೀನೇ ಅಮೃತ, ನಾಶರಹಿತಳು, ನಿತ್ಯಸ್ವರೂಪಳು, ನೀನು ತ್ರಿಮಾತ್ರೆಯ ಸ್ವರೂಪಳೂ ಆಗಿರುವೆ. ಹೇ ದೇವಿ, ನೀನು ಅರ್ಧ ಮಾತ್ರಾ ರೂಪದಲ್ಲಿರುವವಳು, ನಿತ್ಯಳು, ನೀನೇ ಸಂಧ್ಯಾ, ಸಾವಿತ್ರೀ ಮತ್ತು ಮಹಾಮಾತೆಯು, ನೀನು ಈ ಜಗತ್ತಿನ ಸೃಷ್ಟಿಕಾರಣಳು, ಸ್ಥಿತಿರೂಪಕಳು ಕೊನೆಗಾಲದಲ್ಲಿ ಸಂಹಾರಕಳು. ಹೇ ವಿಶ್ವ ರೂಪಿಣಿಯೇ ಸೃಷ್ಟಿಸಮಯದಲ್ಲಿ ನೀನು ಜಗತ್ತಿನ ಸೃಷ್ಟಿಶಕ್ತಿಯಾಗಿ ಪ್ರಕಾಶಿಸುವೆ. ಪಾಲನ ಸಮಯದಲ್ಲಿ ಶಕ್ತಿಸ್ವರೂಪಳಾಗಿ ಬೆಳಗುತ್ತೀಯೆ. ಅಂತ್ಯ ಕಾಲದಲ್ಲಿ ಸಂಹಾರ ಶಕ್ತಿಸ್ವರೂಪಳಾಗಿ ಪ್ರಕಾಶಿಸುವೆ. ನೀನು ಮಹಾವಿದ್ಯೆ, ನೀನು ಮಹಾಮಾಯೆ, ನೀನು ಮಹಾಮೇಧಾಶಕ್ತಿ, ಮಹಾಸ್ಮೃತಿ, ಮಹಾಮೋಹ ಮಹಾದೇವಿ ಮತ್ತು ಮಹೇಶ್ವರಿ, ನೀನು ಸಮಸ್ತ ವಸ್ತುಗಳ ಮೂಲಕಾರಣಳು, ತ್ರಿಗುಣಗಳನ್ನು ಪ್ರಕಾಶಗೊಳಿಸುವವಳು ; ಕಾಲರಾತ್ರಿಯೂ, ಮಹಾರಾತ್ರಿಯೂ, ಮತ್ತು ದಾರುಣವಾದ ಮೋಹರಾತ್ರಿಯೂ ನೀನೇ, ನೀನೇ ಶ್ರೀ, ನೀನೇ ಈಶ್ವರಿ.

---

* ಮಾರ್ಕಂಡೇಯ ಪುರಾಣ. ಚಾಮರಾಜಗ್ರಂಥಮಾಲಾ, ಮೈಸೂರು, ಅಧ್ಯಾಯ 78, ಶ್ಲೋಕ 71.

ನೀನೇ ಹ್ರೀ, ನೀನೇ ನಿಶ್ಚಯಾತ್ಮಿಕವಾದ ಬುದ್ಧಿ, ನೀನೇ ಲಜ್ಜೆ, ಪುಷ್ಟಿ ಮತ್ತು ತುಷ್ಟಿ, ನೀನೇ ಶಾಂತಿ, ನೀನೇ ಕ್ಷಾಂತಿ.

ಖಡ್ಗ, ಶೂಲ, ಗದೆ, ಚಕ್ರ, ಶಂಖ, ಧನುಸ್ಸು, ಬಾಣಗಳು, ಭುಶುಂಡಿ, ಪರಿಘ ಮುಂತಾದ ಆಯುಧಗಳನ್ನು ಧರಿಸಿ ಘೋರಸ್ವರೂಪಳಾಗಿದ್ದೀಯೆ, ನೀನು ಸೌಮ್ಯಳಾಗಿರುವೆ, ಪ್ರಪಂಚದ ವಸ್ತುಗಳಿಂದ ಸೌಮ್ಯತರಳು, ಅತಿಸುಂದರಿ, ಪರಾಪರಗಳಲ್ಲೆಲ್ಲ ಪರಮಶ್ರೇಷ್ಠಳಾಗಿರುವ ಪರಮೇಶ್ವರಿಯೂ ನೀನೇ, ಪ್ರಪಂಚದ ಚರಾಚರಗಳಲ್ಲಿ ವ್ಯಾಪಿಸಿರುವ ನಿನ್ನನ್ನು ಹೇಗೆ ಸ್ತುತಿಸಲಿ ?

ಯಾರು ಈ ಪ್ರಪಂಚವನ್ನು ಸೃಷ್ಟಿಸುವರೋ, ಕಾಪಾಡುವರೋ, ಕೊನೆಗೆ ತನ್ನಲ್ಲಿಯೇ ಅಡಗಿಸಿಕೊಳ್ಳುವರೋ ಅಂತಹವರೂ ಕೂಡ ನಿನ್ನಿಂದ ನಿದ್ರಾವಶ ರಾಗಿರುವರು ಹೀಗಿರುವಾಗ ನಿನ್ನನ್ನು ಸ್ತುತಿಸಲು ಯಾರಿಂದ ತಾನೇ ಸಾಧ್ಯ? ಬ್ರಹ್ಮನಾದ ನನಗೂ, ವಿಷ್ಣುವಿಗೂ, ಮತ್ತು ರುದ್ರನಿಗೂ ಶರೀರವನ್ನು ಧರಿಸುವ ಹಾಗೆ ನೀನೇ ಮಾಡಿಸಿರುವೆ. ಆದುದರಿಂದ ನಿನ್ನನ್ನು ಸ್ತುತಿಸಲು ಯಾರು ತಾನೇ ಶಕ್ತರಾದಾರು ?

ದೇವೀ, ಈ ಮಧುಕೈಟಭರು ನನ್ನ ಇರುವಿಕೆಗೇ ಕಂಟಕರಾಗಿರುವವರು. ಅವರನ್ನು ನೀನು ಮೋಹಗೊಳಿಸುವವಳಾಗು. ಜಗತ್‌ಸ್ವಾಮಿಯಾದ ವಿಷ್ಣುವು ಯೋಗ ನಿದ್ರೆಯಿಂದ ಏಳುವಂತೆ ಮಾಡಿ ಈ ಮಹಾಸುರರನ್ನು ನಾಶಮಾಡುವ ಬುದ್ಧಿಯನ್ನು ಅನುಗ್ರಹಿಸು.

ಹೀಗೆ ಬ್ರಹ್ಮನು ಪ್ರಾರ್ಥಿಸಲಾಗಿ ತಾಮಸೀ ದೇವಿಯು ವಿಷ್ಣುವಿನ ಕಣ್ಣು, ಬಾಯಿ, ಮೂಗು, ಬಾಹುಗಳು, ಹೃದಯ ಎಂಬೀ ಭಾಗಗಳಿಂದ ಹೊರಬಂದು ಅವ್ಯಕ್ತತತ್ತ್ವದಿಂದ ಬ್ರಹ್ಮನ ಕಣ್ಣುಗಳಿಗೆ ಗೋಚರಳಾದಳು. ಆಗ ಮಹಾವಿಷ್ಣುವೂ ನಿದ್ರೆಯಿಂದ ಮೇಲೆದ್ದನು. ಕ್ರೂರರಾದ ಮಧುಕೈಟಭರನ್ನು ನೋಡಿದನು. ತಕ್ಷಣವೇ ಅವರೊಡನೆ ಯುದ್ಧಕ್ಕೆ ನಿಂತನು. ಯುದ್ಧವು ಎಷ್ಟು ದಿನ ನಡೆದರೂ ಜಯಾಪಜಯಗಳು ನಿರ್ಧಾರವಾಗಲಿಲ್ಲ. ಆಗ ಮಾತೆಯು ಮಧು - ಕೈಟಭರನ್ನು ಪ್ರವೇಶಿಸಿದಳು ಯೋಗಮಾಯೆಯಿಂದ ಮೋಹಿತರಾಗಿ " ನಮ್ಮಿಂದ ವರವನ್ನು ಪಡೆದುಕೋ " ಎಂದು ಹೇಳಿದರು. ವಿಷ್ಣುವು ನಮ್ಮಿಂದ "ನೀವು ವಧಿಸಲ್ಪಡಿರಿ " ಅದೇ ನಮಗೆ ಬೇಕಾದ ವರವೆಂದು ಹೇಳಿದನು. ಆಗ ಎಲ್ಲೆಡೆಯಲ್ಲಿಯೂ ನೀರು ಆವರಿಸಿತ್ತು ಆದುದರಿಂದ ನೀರಿಲ್ಲದ ಸ್ಥಳದಲ್ಲಿ ನಮ್ಮನ್ನು ವಧಿಸು ಎಂದರು, ಮಹಾ ವಿಷ್ಣುವು ಅವರನ್ನು ತನ್ನ ತೊಡೆಯ ಮೇಲೆ ಮಲಗಿಸಿ ಕೊಂಡು ಅವರ ಶಿರಚ್ಛೇದನ ಮಾಡಿದನು. ಹೀಗೆ ಮಹಾಮಾಯೆಯ ಮಹಿಮೆಯಿಂದ ಮಧುಕೈಟಭರ ಸಂಹಾರವಾಯಿತು.

# ಮಹಿಷಾಸುರ ವಧಃ

## ಅಥ ಮಹಾಲಕ್ಷ್ಮೀಧ್ಯಾನಮ್

ಓಂ | ಅಕ್ಷಸ್ರಕ್ಪರಶುಂ ಗದೇಷುಕುಲಿಶಂ ಪದ್ಮಂ ಧನುಃ ಕುಂಡಿಕಾಂ
ದಂಡಂ ಶಕ್ತಿಮಸಿಂ ಚ ಚರ್ಮಜಲಜಂ ಘಂಟಾಂ ಸುರಾಭಾಜನಮ್ |
ಶೂಲಂ ಪಾಶಸುದರ್ಶನೇ ಚ ದಧತೀಂ ಹಸ್ತೈಃ ಪ್ರವಾಲಪ್ರಭಾಂ
ಸೇವೇ ಸೈರಿಭಮರ್ಧಿನೀಮಿಹ ಮಹಾಲಕ್ಷ್ಮೀಂ ಸರೋಜಸ್ಥಿತಾಮ್ ||

ಮಹಾಲಕ್ಷ್ಮಿಯು ತನ್ನ ಹದಿನೆಂಟು ಕೈಗಳಿಂದ ಜಪಮಾಲೆ, ಪರಶು, ಗದೆ, ಬಾಣ, ಸಿಡಿಲು, ಪದ್ಮ, ಧನುಸ್ಸು, ಮಡಕೆ, ದಂಡ, ಶಕ್ತಿ, ಕತ್ತಿ, ಗುರಾಣಿ, ಶಂಖ, ಘಂಟೆ, ಸುರಾಪಾತ್ರೆ, ಶೂಲ, ಪಾಶ, ಸುದರ್ಶನಚಕ್ರ ಇವುಗಳನ್ನು ಧರಿಸಿರುವ, ಹವಳದಂತೆ ದೇಹಕಾಂತಿಯುಳ್ಳ, ಕಮಲದಲ್ಲಿ ಆಸೀನಳಾಗಿರುವ ಮತ್ತು ಮಹಿಷಾಸುರ ಮರ್ದಿನಿಯಾದ ಮಹಾಲಕ್ಷ್ಮಿಯನ್ನು ಪ್ರಾರ್ಥಿಸುತ್ತೇನೆ.

ದೇವತೆಗಳಿಗೆ ಇಂದ್ರನೂ, ರಾಕ್ಷಸರಿಗೆ ಮಹಿಷಾಸುರನೂ ರಾಜರಾಗಿದ್ದರು. ಇವರಿಬ್ಬರಿಗೂ ಬಹು ದೀರ್ಘಕಾಲದ ಯುದ್ಧ ನಡೆಯಿತು. ಈ ಯುದ್ಧದಲ್ಲಿ ದೇವ ಸೈನ್ಯವು ಪೂರ್ಣವಾಗಿ ಸೋತಿತು. ಮಹಿಷಾಸುರನು ಇಂದ್ರನ ಸಿಂಹಾಸನವನ್ನೇರಿದನು. ಆಗ ದೇವತೆಗಳು ಬ್ರಹ್ಮನನ್ನೂ ಪರಶಿವನನ್ನೂ ಜೊತೆ ಮಾಡಿಕೊಂಡು ವಿಷ್ಣುವಿನ ಬಳಿ ಸಾರಿದರು. ಅವರು ಮಹಾವಿಷ್ಣುವಿನ ಬಳಿ ನಡೆದುದನ್ನೆಲ್ಲಾ ವಿವರವಾಗಿ ವಿವರಿಸಿದರು. ಆ ರಾಕ್ಷಸನು ಅಷ್ಟದಿಕ್ಪಾಲರ ಪೂರ್ಣ ಅಧಿಕಾರ ಹೊಂದಿದ್ದನು. ದೇವತೆಗಳು ಅವನಿಗೆ ಅಂಜಿ ಭೂಲೋಕದಲ್ಲಿ ಸಾಧಾರಣ ಜನರಂತೆ ವಾಸಿಸ ತೊಡಗಿದರು ಎಂದು ವಿವರಿಸಿ ಮಹಾ ವಿಷ್ಣುವಿನಲ್ಲಿ ಶರಣಾದರು. ಆಗ ಕುಪಿತನಾದ ಮಹಾವಿಷ್ಣುವಿನ ಮುಖದಿಂದ ಮಹತ್ತಾದ ಒಂದು ತೇಜಸ್ಸು ಹೊರ ಬಂದಿತು. ಅದೇ ಸಮಯದಲ್ಲಿ ಬ್ರಹ್ಮ ಮತ್ತು ಪರಶಿವನ ಮುಖದಿಂದಲೂ ತೇಜಸ್ಸುಗಳು ಹೊರಬಂದವು. ಆಗ ಅಲ್ಲಿ ನೆರೆದಿದ್ದ ಇಂದ್ರನೇ ಮೊದಲಾದವರ ಮುಖದಿಂದಲೂ ತೇಜಸ್ಸು ಹೊರ ಬಂದು ಒಂದಾಗಿ ಐಕ್ಯ ಹೊಂದಿತು. ಆ ತೇಜಸ್ಸಿನ ಜ್ವಾಲೆಯು ದಿಗಂತವನ್ನು ವ್ಯಾಪಿಸಿತು. ಆಗ ಆ ತೇಜಸ್ಸು ದೇವಿಯ ಆಕಾರವನ್ನು ಧರಿಸಿತು.

ಶಂಭುವಿನ ತೇಜಸ್ಸು ಮುಖವಾಯಿತು. ಯಮನ ತೇಜಸ್ಸು ಕೇಶವಾಯಿತು. ವಿಷ್ಣುವಿನ ತೇಜಸ್ಸು ಬಾಹುಗಳಾದವು. ಸೋಮ ದೇವತೆಯ ತೇಜಸ್ಸು ಸ್ತನಗಳಾದವು. ಇಂದ್ರನ ತೇಜಸ್ಸು ನಡುವಾಯಿತುಃ ವರಣನ ತೇಜಸ್ಸು ಮೊಣಕಾಲಾಯಿತು, ತೊಡೆಗಳು ಭೂದೇವಿಯಿಂದ, ಉಂಟಾದವು. ಬ್ರಹ್ಮನ ತೇಜಸ್ಸಿನಿಂದ ಪಾದಗಳೂ, ಸೂರ್ಯನ ತೇಜಸ್ಸಿನಿಂದ ಪಾದದ ಬೆರಳುಗಳೂ, ವಸುಗಳಿಂದ ಕೈ ಬೆರಳುಗಳೂ,

* ಮಾರ್ಕಂಡೇಯ ಪುರಾಣೇಸಾವರ್ಣಿಕೇ ಮನ್ವಂತರೇ ಶ್ರೀ ದೇವೀ ಮಾಹಾತ್ಮ್ಯೇ ಮ್ಯಧುಕೈಟಭವಧೋ ನಾಮ ೭೮ ಅಧ್ಯಾಯಃ.

ಕುಬೇರನಿಂದ ಮೂಗೂ, ಪ್ರಜಾಪತಿಯಿಂದ ದಂತಗಳೂ, ಅಗ್ನಿಯಿಂದ ಮೂರು ಕಣ್ಣುಗಳೂ, ಸಂಧ್ಯಾಕಾಲದೇವತೆಯಿಂದ ಹುಬ್ಬುಗಳೂ, ವಾಯುವಿನಿಂದ ಕಿವಿಗಳೂ, ಇತರ ದೇವತೆಗಳ ತೇಜಸ್ಸಿನಿಂದ ಒಡಗೂಡಿ ಸರ್ವಮಂಗಳೆಯಾಗಿ ಪ್ರಕಾಶಿಸಿದಳು. ಇದನ್ನು ನೋಡಿದ ದೇವತೆಗಳು ಬಹಳ ಸಂತೋಷಪಟ್ಟರು. ಅನಂತರ ಪ್ರತಿ ದೇವತೆಗಳೂ ತಮ್ಮದೇ ಆದ ಪ್ರತ್ಯಾಯುಧಗಳನ್ನು ಮಂತ್ರ ಪೂರ್ವಕವಾಗಿ ಅನುಗ್ರಹಿಸಿದರು. ಬೇರೆ ಬೇರೆ ದೇವತೆಗಳು ಅವಳಿಗೆ ಬೇಕಾದ ಆಭರಣಗಳನ್ನು ಅನುಗ್ರಹಿಸಿದರು. ದೇವತೆಗಳ ಅಭಿಪ್ರಾಯವನ್ನು ಗ್ರಹಿಸಿದ ಆ ದಿವ್ಯಶಕ್ತಿಯು ಗಟ್ಟಿಯಾಗಿ ಘರ್ಜಿಸಿತು. ಇದರಿಂದ ಲೋಕಗಳು ಕ್ಷೋಬೆಗೊಂಡು ಸಮುದ್ರಗಳು ಚಲಿಸಿದವು. ದೇವತೆಗಳು ಜಯಕಾರ ಮಾಡಿದರು.

ಭೂಮಿಯು ಚಲಿಸಿತು, ಪರ್ವತಗಳು ಅಲುಗಾಡಿದವು, ದೇವತೆಗಳು ಬಹಳ ಸಂತೋಷಗೊಂಡರು. ಆ ಸಿಂಹವಾಹಿನಿಯನ್ನು ಕುರಿತು ಸಂತೋಷದಿಂದ ಜಯಕಾರ ಮಾಡಿದರು. ಋಷಿಮುನಿಗಳು ಬಹುಭಕ್ತಿಯಿಂದ ಸ್ತುತಿಸಿದರು. ದೇವಿಯ ಅಂಶದಿಂದ ಮಾನಸಿಕ ಬಯಕೆಯಂತೆ ಭಾರೀ ಸೈನ್ಯವೂ ಹುಟ್ಟಿಕೊಂಡಿತು. ದೇವಿಯು ಯುದ್ಧ ಸನ್ನದ್ಧಳಾದಳು.

ಅನಂತರ ಆ ರಾಕ್ಷಸನೂ ಇತ್ತ ದೇವಿಯನ್ನು ಕಂಡನು. ತನ್ನ ಸಾವಿರ ಬಾಹುಗಳಿಂದ ಎಲ್ಲಾ ಕಡೆಗಳಿಗೂ ಪಸರಿಸಿದ್ದ ದೇವಿಯನ್ನು ಕಂಡು ದಿಙ್ಮೂಢನಾದನು. ಮಹಿಷಾಸುರನು ಚಿಕ್ಷುರ, ಚಾಮರನೆಂಬ ದಂಡನಾಯಕರೊಡ ಗೂಡಿ ಯುದ್ಧಕ್ಕೆ ಬಂದನು. ಅಪಿಲೋಮನೆಂಬುವನು ಐದು ಕೋಟಿ ಸೈನ್ಯದಿಂದಲೂ, ಬಾಷ್ಕಲನೆಂಬುವನು ಅರವತ್ತು ಲಕ್ಷ ರಥ ಸೈನ್ಯದಿಂದಲೂ ಕೂಡಿಕೊಂಡರು. ಉಗ್ರದರ್ಶನನೆಂಬುವವನು ಅನೇಕ ಸಹಸ್ರ ರಥ, ಆನೆ, ಕುದುರೆಗಳೊಂದಿಗೂ ಒಂದು ಕೋಟಿ ಕಾಲಾಳುಗಳೊಂದಿಗೂ ಬಂದು ಸೇರಿಕೊಂಡನು, ಮತ್ತು ಬಿಡಾಲನೆಂಬುವನು ಐದು ಲಕ್ಷ ಸಂಖ್ಯೆಯ ರಥ ಸೈನ್ಯ ಪರಿವಾರದೊಂದಿಗೆ ಬಂದು ಸೇರಿದನು. ಹೀಗೆ ಮಹಿಷಾಸುರನ ಸೈನ್ಯಕ್ಕೆ ಸಹಸ್ರ, ಸಹಸ್ರ ಸಂಖ್ಯೆಯಲ್ಲಿ ಎಲ್ಲೆಡೆಯಿಂದಲೂ ದೊಡ್ಡ ಬಲವು ಬಂದು ಸೇರಿತು.

ದೇವಿಯೊಂದಿಗೆ ತೋಮರ, ಬಿಂದಿ, ಪಾಲ, ಶಕ್ತಿ, ಮುಸಲ, ಖಡ್ಗ, ಪರಶು, ಪಟ್ಟಿಶ, ಖಡ್ಗಗಳಿಂದ ಯುದ್ಧ ಮುಂದುವರಿಯಿತು. ಚಂಡಿಕಾ ದೇವಿಯಾದರೋ ತನ್ನ ಬಹುಶಕ್ತಿಯಿಂದ ಕೂಡಿದ ಶಕ್ತ್ಯಾಯುಧಗಳಿಂದ ಅವರ ಅಸ್ತ್ರ ಶಸ್ತ್ರಗಳನ್ನು ಧ್ವಂಸ ಮಾಡಿದಳು. ಸರ್ವೇಶ್ವರಿಯಾದ ದೇವಿಯಾದರೋ ಬಹು ಹಸನ್ಮುಖಿದಿಂದ ಭೀಕರ ಯುದ್ಧವನ್ನು ಲೀಲಾಜಾಲವಾಗಿ ಕೈ ಗೊಂಡಳು. ದೇವಿಯ ಯುದ್ಧವನ್ನು ನೋಡಿದ ದೇವತೆಗಳು ದೇವಿಗೆ ಜಯಕಾರ ಮಾಡುತ್ತಾ ಶಂಖ, ನಗಾರಿ, ಮೃದಂಗಗಳಿಂದ ವಿಜಯ ಧ್ವನಿ ಮಾಡಿದರು. ಸಣ್ಣ ಬೆಂಕಿಯಾದರೂ ದೊಡ್ಡದಾದ ಸೌದೆಯ ಗುಡ್ಡೆಯನ್ನು ಸುಲಭವಾಗಿ ಬೇಯಿಸುವಂತೆ ದೇವೀಶಕ್ತಿಯು ರಾಕ್ಷಸ

ಶಕ್ತಿಯನ್ನು ಧ್ವಂಸ ಮಾಡತೊಡಗಿತು.

ಆಗ ಚಕ್ಷುರನೆಂಬ ರಾಕ್ಷಸನು ದೇವಿಯನ್ನು ತನ್ನ ಸಕಲ ಸೈನ್ಯದೊಂದಿಗೆ ಬಂದು ಎರಗಿದನು. ಮಳೆಗರೆದ ಬಾಣರಾಶಿಯನ್ನು ಸುಲಭವಾಗಿ ತುಂಡುಮಾಡಿದ ಆ ಮಹಾಶಕ್ತಿಯು ಅವನನ್ನು ತನ್ನಬಾಣದಿಂದ ಸಂಹರಿಸಿತು. ಅದೇ ಯುದ್ಧದಲ್ಲಿ ಉದಗ್ರನೆಂಬ ಮಹಾ ಪರಾಕ್ರಮಿ ರಾಕ್ಷಸನು ಹತನಾದನು ಅನಂತರ ಉದ್ಧತನನೆಂಬ ರಾಕ್ಷಸನು ಯುದ್ಧಕ್ಕೆ ಬಂದನು. ಅವನನ್ನು ತನ್ನ ಭಿಂದಿಪಾಲವೆಂಬ ಅಸ್ತ್ರದಿಂದಲೂ ಬಾಷ್ಕಲನೆಂಬುವನನ್ನು ಬಾಣಗಳಿಂದಲೂ, ತಾಮ್ರ ಅಂಧಕರೆಂಬುವವರನ್ನು ತನ್ನ ಶಕ್ತ್ಯಾಯುಧಗಳಿಂದಲೂ ಸಂಹರಿಸಿತು.

ತನ್ನ ತ್ರಿಶೂಲದಿಂದ ಉಗ್ರಾಸ್ಯ, ಉಗ್ರವೀರ್ಯ, ಮಹಾಹ, ಬಿಡಾಲ, ದುರ್ಧರ, ದುರ್ಮುಖ ಮೊದಲಾದ ಮಹಾ ವೀರರನ್ನು ಧ್ವಂಸ ಮಾಡಿದಳು. ಮಹಿಷಾಸುರನು ಬಹು ಕೋಪದಿಂದ ತನ್ನ ಕೋಣದ ರೂಪದಿಂದ ದೇವಿಯ ಕಡೆಗೆ ಧಾವಿಸಿದನು. ಆ ಕೋಣವಾದರೋ ರಾಕ್ಷಸರನ್ನು ನಡುಗಿಸುತ್ತಾ ಎಲ್ಲವನ್ನೂ ನಾಶ ಮಾಡ ತೊಡಗಿತು. ಆಗ ಆ ಜಗದಂಬಿಕೆಗೆ ಉಗ್ರವಾದಂತಹ ಕೋಪವು ಬರಲಾಯಿತು. ಆ ರಾಕ್ಷಸನಾದರೋ ವಿಪರೀತ ಕೋಪದಿಂದ ಭೂಮಿಯನ್ನು ಕೆರೆದುದರಿಂದ ಎದ್ದ ದೂಳು ಭೂಮಂಡಲವನ್ನು ಆವರಿಸಿತು. ಬಾಲದ ಏಟಿನಿಂದಾಗಿ ಸಮುದ್ರವು ಅಲ್ಲೋಲ ಕಲ್ಲೋಲವಾಯಿತು. ಕೊಂಬುಗಳ ವೇಗದಿಂದ ಮೋಡಗಳು ಚಲ್ಲಾ ಪಿಲ್ಲಿಯಾದವು. ಆಗ ಚಂಡಿಕೆಯು ಅವನನ್ನು ಸಂಹರಿಸಲು ನಿರ್ಧರಿಸಿದಳು. ರಾಕ್ಷಸನು ದೇವಿಯ ಮೇಲೆ ಎರಗಿ ಸಿಂಹವನ್ನು ಎಳೆದನು ಆಗ ದೇವಿಯು ಅವನ ಕೈಗಳನ್ನು ಕತ್ತರಿಸಿ ಹಾಕಿದಳು. ದೇವಿಯು ಪುನಃ ಪುನಃ ಪಾನೀಯವನ್ನು ಸೇವಿಸುತ್ತಾ ಆ ರಾಕ್ಷಸನನ್ನು ಎದುರಿಸಿದಳು. ದೇವಿಯು ಬಹು ದೊಡ್ಡದಾದ ಆಕಾರವನ್ನು ಪಡೆದಳು ಮೇಲೇರಿ ಅವನನ್ನು ತನ್ನ ಪಾದಗಳಿಂದ ತುಳಿದು ಕೊಂಡಳು, ತನ್ನ ತ್ರಿಶೂಲದಿಂದ ಅವನ ಶಿರವನ್ನು ಕತ್ತರಿಸಿದಳು. ಹತನಾದ ಮಹಿಷನನ್ನು ನೋಡಿ ರಾಕ್ಷಸರು ಭಯಭೀತರಾದರು. ದೇವಿಯ ಸೈನ್ಯವು ಅವನನ್ನು ಪೂರ್ಣವಾಗಿ ನಾಶ ಮಾಡಿತು. ದೇವಿಯ ಶಕ್ತಿಯನ್ನು ಕುರಿತು ದೇವತೆಗಳು ಹಾಡಿ ಹೊಗಳಿದರು. ಹೂಮಳೆಗರೆದರು. ಗಂಧರ್ವರು ಗಾನ ಮಾಡಿದರು. ಎಲ್ಲಾ ದೇವತೆಗಳೂ ಹರ್ಷಗೊಂಡರು.

### ದೇವಿಯನ್ನು ಕುರಿತು ಇಂದ್ರಾದಿಗಳ ಸ್ತುತಿ

*(ಈ ಸ್ತೋತ್ರ ಮಾಲೆಯು ಬಹು ರಮ್ಯವಾಗಿದೆ. ದಿನವೂ ಪಾರಾಯಣ ಮಾಡಲೂ ತಕ್ಕುದಾಗಿದೆ ಆಸಕ್ತರಾದವರು ಮೂಲದಲ್ಲಿ ರುವಂತೆ ಪಾರಾಯಣ ಮಾಡಬಹುದು)*

ತ್ರಿಲೋಚನೆಯಾದ ದೇವಿಯು ಶಿರದಲ್ಲಿ ಚಂದ್ರನನ್ನೂ ತನ್ನ ಕೈಗಳಲ್ಲಿ ಶಂಖ, ಚಕ್ರ, ಕೃಪಾಣ, ತ್ರಿಶೂಲಗಳೂ ಧರಿಸಿ ತ್ರಿಭುವನ ಸುಂದರಿಯಾಗಿರುವ ದೇವಿಯನ್ನು 'ಜಯಾ' ಎಂದು ದೇವತೆಗಳು ಸ್ತುತಿಸ ತೊಡಗಿದರು.

ಯಾವ ದೇವಿಯ ಶಕ್ತಿಯಿಂದ ಈ ಜಗತ್ತೆಲ್ಲವೂ ವ್ಯಾಪ್ತವಾಗಿದೆಯೋ ಅಂತಹ ಸಮಸ್ತ ದೇವ ಮಹರ್ಷಿಗಳಿಗೆ ಪೂಜ್ಯಳಾದ ಅಂಬಿಕೆಯನ್ನು ಭಕ್ತಿಯಿಂದ ನಮಸ್ಕರಿಸುತ್ತೇನೆ. ಆಕೆಯು ನಮಗೆ ಶುಭತರಲಿ.

ಯಾರು ಪ್ರಕೃತಿಯನ್ನು ಬ್ರಹ್ಮ, ವಿಷ್ಣು, ಮಹೇಶ್ವರಾದಿಗಳೂ ಸ್ತುತಿಸಿ ಮುಗಿಸಲಾರರೋ ಅಂತಹ ಚಂಡಿಕೆಯನ್ನು ನಾನು ನಮಸ್ಕರಿಸುತ್ತೇನೆ. ಆಕೆಯು ನಮ್ಮ ಭಯವನ್ನು ಪರಿಹರಿಸಲಿ.

ಹೇ ದೇವಿಯೇ, ಪುಣ್ಯವಂತರ ಮನೆಯಲ್ಲಿ ಲಕ್ಷ್ಮೀ ರೂಪದಿಂದಲೂ ಪಾಪಿಗಳ ಮನೆಯಲ್ಲಿ ಅಲಕ್ಷ್ಮೀ ರೂಪದಿಂದಲೂ, ಸುಸಂಸ್ಕೃತರ ಹೃದಯದಲ್ಲಿ ನಿಶ್ಚಯಾತ್ಮಕ ಬುದ್ಧಿಯಾಗಿಯೂ, ಸಜ್ಜನರಲ್ಲಿ ಶ್ರದ್ಧೆಯಾಗಿಯೂ, ಸದ್ವಂಶಜರಲ್ಲಿ ಲಜ್ಜೆಯಾಗಿಯೂ ಗೋಚರವಾಗುವ ಆ ದಿವ್ಯಶಕ್ತಿಯನ್ನು ನಮಿಸುತ್ತೇನೆ. ಅವಳು ಈ ಪ್ರಪಂಚವನ್ನು ಕಾಪಾಡಲಿ.

ಸಮಸ್ತ ಜಗತ್ತುಗಳಿಗೂ ಕಾರಣಳು ನೀನೇ, ತ್ರಿಗುಣೆಯಾದರೂ ಅವುಗಳ ದೋಷಗಳಿಂದ ಹರಿಹರಾದಿಗಳೂ ನಿನ್ನನ್ನು ಅರಿಯಲಾರರು. ನೀನು ಅಪಾರಳು, ನೀನು ಸರ್ವಾಶ್ರಯಳು, ಈ ಜಗತ್ತೆಲ್ಲವೂ ನಿನ್ನ ಅಂಶವಾಗಿದೆ. ನೀನೇ ಅವ್ಯಾಕೃತಳು, ಪರಮ ಪ್ರಕೃತಿಯು, ಸರ್ವಮೂಲಳು.

ಹೇ ದೇವಿ, ಯಜ್ಞಗಳ 'ಸ್ವಾಹಾ' ಮಂತ್ರವೂ ನೀನೇ, ಪಿತೃಗಣಗಳಿಗೆ ತೃಪ್ತಿಯನ್ನುಂಟು ಮಾಡುವ 'ಸ್ವಧಾ' ಮಂತ್ರವೂ ನೀನೇ.

ಹೇ ದೇವಿ ಪರವಿದ್ಯೆಯೂ, ಅಪರಾವಿದ್ಯೆಯೂ ನೀನೇ ಆಗಿರುವೆ.

ನೀನು ಶಬ್ದಸ್ವರೂಪಳು, ಋಗ್ವೇದಾದಿಗಳ ಆಶ್ರಯಳು, ವೇದ ಮಾತೆಯೂ ನೀನೇ, ಷಡ್ಗುಣ್ಯೈಶ್ವರ್ಯ ಸಂಪನ್ನಳೂ ನೀನೇ, ಜಗತ್ತಿನ ಲೌಕಿಕ ಶಕ್ತಿಯೂ ನೀನೇ, ಸರ್ವ ಜಗತ್ತುಗಳ ದುಃಖನಾಶಿನಿಯೂ ನೀನೇ ಆಗಿರುವೆ.

ಹೇ ದೇವಿ ಯಾವುದರ ಸಹಾಯದಿಂದ ಸಕಲ ಶಾಸ್ತ್ರಗಳ ಸಾರವನ್ನು ತಿಳಿಯಬಹುದೋ ಆ ಮೇಧಾ ಶಕ್ತಿಯೂ ನೀನೇ, ದುರ್ಗಮವಾದ ಭವ ಸಾಗರವನ್ನು ದಾಟಲು ನೌಕೆಯಂತಿರುವ ದುರ್ಗಾದೇವಿಯೂ ನೀನೇ, ವಿಷ್ಣುವಿನ ಹೃದಯದಲ್ಲಿ ವಾಸವಾಗಿರುವ ಮಹಾಲಕ್ಷ್ಮಿಯೂ ನೀನೇ, ಶಿವನ ಹೃದಯದಲ್ಲಿ ನೆಲೆಸಿರುವ ಪಾರ್ವತಿಯೂ ನೀನೇ.

ಹೇ ದೇವಿ. ಪ್ರಸನ್ನಳಾಗು. ಪರಮರೂಪಳಾದ ನೀನು ಪ್ರಪಂಚದಲ್ಲಿರುವ ದುಷ್ಟಶಕ್ತಿಗಳನ್ನು ನಾಶ ಮಾಡುವವಳಾಗಿರುವೆ. ಯಾರನ್ನು ನೀನು ಕರುಣೆಯಿಂದ ನೋಡುವೆಯೋ ಅವರು ತಾವು ಬೇಡಿದುದನ್ನು ಹೊಂದುತ್ತಾರೆ. ಯಾರನ್ನು ನೀನು ಕ್ರೂರ ದೃಷ್ಟಿಯಿಂದ ನೋಡುವೆಯೋ ಅವರು ನಾಶವಾಗುವರು.

ಹೇ ದೇವಿ, ಯಾರು ತನ್ನ ನಿತ್ಯಕರ್ಮಗಳನ್ನು ಪ್ರತಿದಿನವೂ ಮಾಡುವರೋ

ಅವರು ನಿನ್ನ ಕೃಪೆಯಿಂದ ಸ್ವರ್ಗವನ್ನು ಪಡೆಯುವವರಾಗುತ್ತಾರೆ. ನೀನು ತ್ರಿಲೋಕ ಫಲದಾತೃವು.

ಹೇ ದೇವಿ, ನಿನ್ನನ್ನು ಸ್ಮರಿಸುವುದರಿಂದ ಸಕಲ ಪಾಪಗಳೂ ನಾಶವಾಗುತ್ತವೆ. ನೀನು ದೇವತೆಗಳನ್ನು ಉದ್ಧರಿಸಬಲ್ಲವಳು. ನಿನ್ನ ಪರಾಕ್ರಮವನ್ನು ಯಾರೊಡನೆ ಹೋಲಿಸಲು ಸಾಧ್ಯ.

ಹೇ ದೇವಿ ನಿನ್ನ ಶೂಲವು ನಮ್ಮನ್ನು ದುಷ್ಟರಿಂದ ರಕ್ಷಿಸಲಿ, ಖಡ್ಗದಿಂದಲೂ, ಬಿಲ್ಲಿನ ಟಂಕಾರದಿಂದಲೂ ಶತ್ರುಗಳನ್ನು ಓಡಿಸು.

ಹೇ ಚಂಡಿಕೆ, ಹೇ ಈಶ್ವರಿ, ಹೇ ಮಹಿಷಾಸುರಮರ್ದಿನಿ, ಹೇ ಅಂಬಿಕೆ ನೀನು ನಾಲ್ಕು ದಿಕ್ಕುಗಳನ್ನೂ ಕಾಪಾಡುವವಳಾಗು.

ದೇವಿಯು ಹಸನ್ಮುಖಳಾದಳು. ಅವಳ ಕೋಪವು ತಗ್ಗಿತು. ಅವಳು ಶಾಂತಳಾದಳು. ದೇವತೆಗಳು ತಮ್ಮ ಎಲ್ಲಾ ಉಪಚಾರ ಪೂಜೆಗಳನ್ನು ನೆರವೇರಿಸಿದರು.

*(ದೇವತೆಗಳು ದೇವಿಯನ್ನು ಪೂಜಿಸಿದುದನ್ನು ಪೂರ್ಣವಾಗಿ ಅರ್ಥೈಸಿಕೊಂಡು ಆಚಾರ್ಯ ಶಂಕರಭಗವತ್ಪಾದರು ಈ ಪೂಜಾವಿಧಾನವನ್ನು ಸಂಕ್ಷಿಪ್ತಗೊಳಿಸಿ ದೇವೀ ಚತುಃಷಷ್ಟ್ಯುಪಚಾರಪೂಜಾಸ್ತೋತ್ರವನ್ನು ರಚಿಸಿದ್ದಾರೆ. ಅದರ ಶಕ್ತಿಯಿಂದ, ದೇವಿಯ ರೂಪವನ್ನೂ ಅವಳ ಕೀರ್ತಿಯನ್ನೂ, ಅರ್ಥಮಾಡಿಕೊಂಡು ದೇವೀ ಸಾನಿಧ್ಯವನ್ನು ಅಂತ್ಯದಲ್ಲಿ ಸೇರ ಬಹುದಾಗಿದೆ.)*

### ಅಪರಾಜಿತಾ ಸ್ತೋತ್ರ

ಋಷಿ ಮುನಿಗಳೂ, ದೇವ ಸಮೂಹವೂ ದೇವಿಯನ್ನು ಪ್ರಾರ್ಥಿಸಿದರು. ಹಿಂದೆ ಶುಂಭ - ನಿಶುಂಭರೆಂಬ ಅಸುರರು ತಮ್ಮ ಮದ ಮತ್ತು ಬಲಗಳಿಂದ ಮೂರು ಲೋಕಗಳ ಆಧಿಪತ್ಯವನ್ನೂ ವಹಿಸಿಕೊಂಡರು. ಅವರು ಸೂರ್ಯನ ಅಧಿಕಾರವನ್ನೂ, ಇಂದ್ರನ ಅಧಿಕಾರವನ್ನೂ, ಎಲ್ಲಾ ದಿಕ್ಪಾಲಕರನ್ನೂ ತಮ್ಮ ಅಧೀನಕ್ಕೆ ತೆಗೆದು ಕೊಂಡರು ದೇವತೆಗಳು ಪರಾಜಿತರಾದರು. ಆಗ ಆ ದೇವತೆಗಳು ದೇವಿಯನ್ನು "ಅಪರಾಜಿತಾ" ಎಂಬ ನಾಮದಿಂದ ಪ್ರಾರ್ಥಿಸಿದರು ದೇವಿಯು ಪ್ರಸನ್ನಳಾಗಿ ಅವರ ತೊಂದರೆಯನ್ನು ನಿವಾರಿಸಲು ಮುಂದಾದಳು.

**ನಮೋ ದೇವ್ಯೈ ಮಹಾದೇವ್ಯೈ ಶಿವಾಯ್ಯೆ ಸತತಂ ನಮಃ |**
**ನಮಃ ಪ್ರಕೃತ್ಯೈ ಭದ್ರಾಯ್ಯೆ ನಿಯತಾಃ ಪ್ರಣತಾಃ ಸ್ಮ ತಾಮ್ || ||೧||**

ದೇವಿಗೆ ನಮಸ್ಕಾರ. ಮಹಾ ದೇವಿಗೆ ನಮಸ್ಕಾರ, ಶಿವೆಗೆ ಸದಾ ನಮಸ್ಕಾರ, ಸರ್ವವ್ಯಾಪಿಗೆ ನಮಸ್ಕಾರ, ಸರ್ವಮಂಗಳದಾಯಿನಿಗೆ ನಮಸ್ಕಾರ, ನಿಯತ ಚಿತ್ತರಾಗಿ ಪುನಃ ಪುನಃ ಆಕೆಯನ್ನು ನಮಸ್ಕರಿಸುತ್ತೇವೆ.

ರೌದ್ರಾಯೈ ನಮೋ ನಿತ್ಯೈ ಗೌರ್ಯೈ ಧಾತ್ರ್ಯೈ ನಮೋ ನಮಃ |
ಜ್ಯೋತ್ಸ್ನಾಯೈ ಚೇಂದುರೂಪಿಣ್ಯೈ ಸುಖಾಯೈ ಸತತಂ ನಮಃ|| ||೨||

ರುದ್ರ ರೂಪಿಯಾದ ದೇವಿಗೆ ನಮಸ್ಕಾರ. ನಿತ್ಯಳೂ, ಗೌರಿಯೂ ಜಗದ್ಧಾತ್ರಿಯೂ ಆದವಳಿಗೆ ನಮಸ್ಕಾರ. ಚಂದ್ರರೂಪವನ್ನು ಧರಿಸಿ ಬೆಳದಿಂಗಳಿನಂತೆ ಸಂತೋಷವನ್ನು ತರುವ ದೇವಿಗೆ ಸತತವೂ ನಮಸ್ಕಾರ.

ಕಲ್ಯಾಣ್ಯೈ ಪ್ರಾಣನಾಮೃದ್ಧ್ಯೈ ಸಿದ್ಧ್ಯೈ ಕೂರ್ಮ್ಯೈ ನಮೋ ನಮಃ |
ನೈರ್ಋತ್ಯೈ ಭೂಭೃತಾಂ ಲಕ್ಷ್ಮ್ಯೈ ಶರ್ವಾಣ್ಯೈ ತೇ ನಮೋ ನಮಃ || ||೩||

ಕಲ್ಯಾಣಿಗೆ ನಮಸ್ಕಾರ, ಐಶ್ವರ್ಯರೂಪಳೂ, ಸಿದ್ಧರೂಪಳೂ ಆದ ದೇವಿಗೆ ಪುನಃ ಪುನಃ ನಮಸ್ಕರಿಸುತ್ತೇನೆ. ಭೂಪತಿಗಳಿಗೆ ಮಹಾಲಕ್ಷ್ಮಿಯಾಗಿಯೂ ಅಲಕ್ಷ್ಮಿಯಾಗಿಯೂ ಇರುವ ಶರ್ವಾಣಿಯಾದ ನಿನಗೆ ಅನೇಕ ನಮಸ್ಕಾರಗಳು.

ದುರ್ಗಾಯೈ ದುರ್ಗಪಾರಾಯೈ ಸಾರಾಯೈ ಸರ್ವಕಾರಿಣೇ |
ಖ್ಯಾತ್ಯೈ ತಥೈವ ಕೃಷ್ಣಾಯೈ ಧೂಮ್ರಾಯೈ ಸತತಂ ನಮಃ || ||೪||

ದುರ್ಗೆಗೆ ನಮಸ್ಕಾರ, ಕಷ್ಟಗಳಿಂದ ಕಾಪಾಡುವವಳಿಗೆ ನಮಸ್ಕಾರ, ಸರ್ವ ವಸ್ತುಗಳ ಚೇತನಳೂ, ಸರ್ವಕಾರಣಳೂ ಆದ ದೇವಿಗೆ ನಮಸ್ಕಾರ. ಕೀರ್ತಿ ವಂತಳಾಗಿ, ಕೃಷ್ಣವರ್ಣದಿಂದ ಕೂಡಿದ ಧೂಮ್ರವರ್ಣದಿಂದ ಸದಾ ಪ್ರಕಾಶಿಸುವ ದೇವಿಗೆ ನಮಸ್ಕಾರ.

ಅತಿ ಸೌಮ್ಯಾತಿರೌದ್ರಾಯೈ ನಮಸ್ತಸ್ಯೈ ನಮೋ ನಮಃ |
ನಮೋ ಜಗತ್ಪ್ರತಿಷ್ಠಾಯೈ ದೇವ್ಯೈ ಕೃತ್ಯೈ ನಮೋ ನಮಃ || ||೫||

ಅತ್ಯಂತ ಸೌಮ್ಯಳೂ, ಮಂಗಳಕಾರಳೂ, ಸರ್ವವ್ಯಾಪಿಯೂ ಆದ ದೇವಿಗೆ ನಮಸ್ಕಾರ. ಜಗತ್ತಿನ ಸ್ಥಿತಿಕಾರಕಳೂ, ಜಗತ್ತಿನ ಕೃತಿರೂಪಳೂ ಆದ ದೇವಿಗೆ ನಮಸ್ಕಾರ.

ಯಾ ದೇವೀ ಸರ್ವಭೂತೇಷು ವಿಷ್ಣುಮಾಯೇತಿ ಶಬ್ದಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೬||

ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ರಂಜಿಸುವಳೋ, ಯಾವ ದೇವಿಯನ್ನು ವಿಷ್ಣುಮಾಯೆಯೆಂದು ಕರೆಯುವರೋ ಅವಳಿಗೆ ನಮಸ್ಕಾರ . ಅವಳಿಗೆ ನಮಸ್ಕಾರ, ಅವಳಿಗೆ ನಮಸ್ಕಾರ.

ಯಾ ದೇವೀ ಸರ್ವಭೂತೇಷು ಚೇತನೇತ್ಯಭಿದೀಯತೇ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೭||

ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಸ್ಥಿತಳಾಗಿರುವಳೋ, ಯಾವಳು ಸರ್ವ ಪ್ರಾಣಿಗಳ ಚೇತನ ಎಂದು ಕರೆಯಲ್ಪಡುವವಳೋ ಅವಳಿಗೆ ನಮಸ್ಕಾರ, ಅವಳಿಗೆ ನಮಸ್ಕಾರ.

ಯಾ ದೇವೀ ಸರ್ವಭೂತೇಷು ಬುದ್ಧಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೮||

ಯಾವ ದೇವಿಯು ಸರ್ವ ಪ್ರಾಣಿಗಳಲ್ಲಿಯೂ ಬುದ್ಧಿರೂಪದಿಂದ ನೆಲೆಸಿರುವಳೋ, ಅವಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ನಿದ್ರಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೯||

ಯಾವ ದೇವಿಯು ಸರ್ವ ಪ್ರಾಣಿಗಳಲ್ಲಿಯೂ ನಿದ್ರಾರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಕ್ಷುಧಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೦||

ಯಾವ ದೇವಿಯು ಸರ್ವಭೂತಗಳಲ್ಲಿಯೂ ಹಸಿವಿನ ರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ಛಾಯಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮೋಸ್ತಸ್ಯೈ ನಮೋ ನಮಃ || ||೧೧||

ಯಾವ ದೇವಿಯು ಸಕಲ ಜೀವರಾಶಿಗಳಲ್ಲಿಯೂ ಛಾಯಾ ರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರ.

ಯಾ ದೇವೀ ಸರ್ವಭೂತೇಷು ಶಕ್ತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೨||

ಯಾವ ದೇವಿಯು ಸರ್ವ ಜೀವಿಗಳಲ್ಲಿಯೂ ಶಕ್ತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ತೃಷ್ಣಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೩||

ಯಾವ ದೇವಿಯು ಸಕಲ ಪ್ರಾಣಿಗಳಲ್ಲಿ ಹಸಿವಿನ ರೂಪದಲ್ಲಿ ನೆಲೆಸಿರುವಳೋ ಅವಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಕ್ಷಾಂತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೪||

ಯಾವ ದೇವಿಯು ಸರ್ವ ಪ್ರಾಣಿಗಳಲ್ಲಿಯೂ ಕ್ಷಮಾರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಜಾತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೫||

ಯಾವ ದೇವಿಯು ಸರ್ವ ಭೂತಗಳಲ್ಲಿಯೂ ಜಾತಿ ರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಲಜ್ಜಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೬||

ಯಾವ ದೇವಿಯು ಸಮಸ್ತ ಪ್ರಾಣಿಗಳಲ್ಲಿಯೂ ಲಜ್ಜಾ ರೂಪದಿಂದ ಗೋಚರಿಸುವಳೋ ಅವಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಶಾಂತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೭||

ಯಾವ ದೇವಿಯು ಸರ್ವ ಭೂತಗಳಲ್ಲಿಯೂ ಶಾಂತಿರೂಪದಿಂದ ನೆಲೆಸಿರುವಳೋ ಅವಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಶ್ರದ್ಧಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೮||

ಯಾವ ದೇವಿಯು ಸರ್ವಭೂತಗಳಲ್ಲಿಯೂ ಶ್ರದ್ಧೆಯರೂಪದಿಂದ ಸಂಸ್ಥಿತಳಾಗಿರುವವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಕಾಂತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೧೯||

ಯಾವ ದೇವಿಯು ಸರ್ವಪ್ರಾಣಿಗಳಲ್ಲಿಯೂ ಕಾಂತಿರೂಪದಿಂದ ನೆಲೆಸಿರುವಳೋ ಆ ದೇವಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಲಕ್ಷ್ಮೀ ರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೦||

ಯಾವ ದೇವಿಯು ಸರ್ವಭೂತಗಳಲ್ಲಿಯೂ ಲಕ್ಷ್ಮೀರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ವೃತ್ತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೧||

ಯಾವ ದೇವಿಯು ಸರ್ವ ಭೂತಗಳಲ್ಲಿಯೂ ಆಯಾ ಪ್ರಾಣಿಗಳ ವೃತ್ತಿ

ರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಸ್ಮೃತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೨||

ಯಾವ ದೇವಿಯು ಸರ್ವಭೂತಗಳಲ್ಲಿಯೂ ನೆನಪಿನರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ದಯಾರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೩||

ಯಾವ ದೇವಿಯು ಸರ್ವಭೂತಗಳಲ್ಲಿಯೂ ದಯಾರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ತುಷ್ಟಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೪||

ಯಾವ ದೇವಿಯು ಸರ್ವಜೀವಿಗಳಲ್ಲಿಯೂ ತೃಪ್ತಿಯರೂಪದಿಂದ ನೆಲೆಸಿರುವಳೋ ಅವಳಿಗೆ ಮತ್ತೆ ಮತ್ತೆ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಮಾತೃರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೫||

ಯಾವ ದೇವಿಯು ಸರ್ವಭೂತಗಳಲ್ಲಿಯೂ ಮಾತೃರೂಪದಿಂದ ನೆಲೆಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಯಾ ದೇವೀ ಸರ್ವಭೂತೇಷು ಭ್ರಾಂತಿರೂಪೇಣ ಸಂಸ್ಥಿತಾ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೬||

ಯಾವ ದೇವಿಯು ಸವಭೂತಗಳಲ್ಲಿಯೂ ಭ್ರಾಂತಿಯ ರೂಪದಿಂದ ನೆಲೆಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರಗಳು.

ಇಂದ್ರಿಯಾಣಾಮಧಿಷ್ಠಾತ್ರೀ ಭೂತಾನಾಂ ಚಾಖಿಲೇಷು ಯಾ |
ಭೂತೇಷು ಸತತಂ ತಸ್ಯೈ ವ್ಯಾಪ್ತಿದೇವ್ಯೈ ನಮೋ ನಮಃ || ||೨೭||

ಯಾವ ದೇವಿಯು ಶರೀರದ ಇಂದ್ರಿಯಗಳ ಮತ್ತು ಪಂಚಭೂತಗಳ ಅಧಿಷ್ಠಾತ್ರಿಯೋ, ಯಾವಳು ಸರ್ವಭೂತಗಳಲ್ಲಿಯೂ ವ್ಯಾಪಿಸಿರುವಳೋ ಅವಳಿಗೆ ಪುನಃ ಪುನಃ ನಮಸ್ಕಾರಗಳು.

ಚಿತಿರೂಪೇಣ ಯಾ ಕೃತ್ಸ್ನಮೇತದ್ವ್ಯಾಪ್ಯ ಸ್ಥಿತಾ ಜಗತ್ |
ನಮಸ್ತಸ್ಯೈ ನಮಸ್ತಸ್ಯೈ ನಮಸ್ತಸ್ಯೈ ನಮೋ ನಮಃ || ||೨೮||

ಯಾವ ದೇವಿಯು ಈ ವಿಶ್ವದ ಸಕಲ ಜೀವ ರಾಶಿಗಳಲ್ಲಿಯೂ ಚಿದ್ರೂಪದಿಂದ ವ್ಯಾಪಿಸಿರುವಳೋ ಆ ದೇವಿಗೆ ಪುನಃ ಪುನಃ ನಮಸ್ಕಾರಗಳು.

**ಸ್ತುತಾ ಸುರೈಃ ಪೂರ್ವಮಭೀಷ್ಟಸಂಶ್ರಯಾತ್ ತಥಾ ಸುರೇಂದ್ರೇಣ ದಿನೇಷು ಸೇವಿತಾ |**
**ಕರೋತು ಸಾ ನಃ ಶುಭಹೇತುರೀಶ್ವರೀ ಶುಭಾನಿ ಭದ್ರಾಣ್ಯಭಿ ಹಂತು ಚಾಪದಃ || ||೭೯||**

ಯಾವ ದೇವಿಯ ಸ್ತುತಿಯನ್ನು ಹಿಂದೆ ಬ್ರಹ್ಮಾದಿ ದೇವತೆಗಳು ಮಾಡಿದ್ದರೋ, ಯಾವ ದೇವಿಯ ಸ್ತುತಿಯನ್ನು ದಿನವೂ ದೇವೇಂದ್ರನು ಮಾಡುತ್ತಿದ್ದನೋ, ಯಾವ ದೇವಿಯ ಸ್ತುತಿಯನ್ನು ಮಾಡುವುದರಿಂದ ಸರ್ವ ಶುಭಗಳು ಉಂಟಾಗುವುದೋ, ಯಾವ ದೇವಿಯ ಸ್ತುತಿಯು ಶುಭವೋ, ಮಂಗಳವೋ ಅವಳನ್ನು ಧ್ಯಾನಿಸುತ್ತೇವೆ.

**ಯಾ ಸಾಂಪ್ರತಂ ಚೋದ್ಧತದೈತ್ಯತಾಪಿತೈರಸ್ಮಾಭಿರೀಶಾ ಚ ಸುರೈರ್ನಮಸ್ಯತೇ |**
**ಯಾ ಚ ಸ್ಮೃತಾ ತತ್ ಕ್ಷಣ ಮೇವ ಹಂತಿ ನಃ ಸರ್ವಾಪದೋ ಭಕ್ತಿವಿನಮ್ರಮೂರ್ತಿಭಿಃ || ||೮೦||**

ಯಾವ ದೇವಿಯು ಸಕಲ ವಿಪತ್ತುಗಳನ್ನು ತಕ್ಷಣವೇ ಹೋಗಲಾಡಿಸುವಳೋ, ಯಾವ ದೇವಿಯು ನಮ್ಮ ಭಕ್ತಿಯನ್ನು ಪ್ರೀತಿಯಿಂದ ಸ್ವೀಕರಿಸುವಳೋ, ಯಾವ ದೇವಿಯು ನಮಗೆ ಶುಭವನ್ನೂ ಮಂಗಳವನ್ನೂ ಉಂಟುಮಾಡಿ ನಮ್ಮನ್ನು ಉದ್ಧರಿಸುವಳೋ ಅವಳನ್ನು ಸ್ಮರಿಸುತ್ತೇನೆ.

ದೇವಿಯು ಪ್ರಸನ್ನಳಾದಳು, ದೇವತೆಗಳನ್ನು ಕುರಿತು "ನೀವು ಯಾರನ್ನು ಹೀಗೆ ಸ್ತುತಿಸುತ್ತಿರುವಿರಿ ?" ಎಂದು ಕೇಳಿದಳು. ಆಗ ಅವಳ ಅಂತರಂಗದಲ್ಲಿ ಅವಿರ್ಭೂತವಾಗಿದ್ದ ಶಿವೆಯು ಹೀಗೆ ಪ್ರೇರೇಪಿಸಿದಳು.

ಆ ಪಾರ್ವತಿಯ ಶರೀರ ಕೋಶದಿಂದ ಹೊರಬಂದ ಕಾರಣದಿಂದ ಆ ತಾಯಿಯು ಲೋಕಗಳಲ್ಲಿ 'ಕೌಶಿಕೀ ' ಎಂದು ಪ್ರಸಿದ್ಧಳಾದಳು. ಅವಳು ಹಾಗೆ ಹೊರ ಬಂದನಂತರ ಕಪ್ಪಾಗಿ ಗೋಚರವಾದಳು ಆದುದರಿಂದ **'ಕಾಲಿಕಾ'** ಎಂದು ಪ್ರಸಿದ್ಧಳಾದಳು.

ದೇವತೆಗಳು ಅವಳ ಸುಂದರರೂಪವನ್ನು ನೋಡಿ ಅವಳನ್ನು ಆನಂದದಿಂದ ಬಹುವಾಗಿ ಪುನಃ ಪುನಃ ಸ್ತುತಿಸಿದರು. ಅನಂತರ ಶುಂಭ - ನಿಶುಂಭರ ಸೇವಕರಾದ ಚಂಡಮುಂಡ ಎಂಬ ಅಸುರರು ಆ ಸುಂದರ ರೂಪವನ್ನು ನೋಡಿದರು. ಅವರು ತಮ್ಮ ಪ್ರಭುವಿಗೆ ಅವಳ ಸುಂದರರೂಪವನ್ನು ವರ್ಣಿಸಿದರು. ಅವನನ್ನು ಆ ದೇವಿಯನ್ನು ನೋಡಲು ಪ್ರೋತ್ಸಾಹಿಸಿದರು. ಇಂದ್ರ ಐರಾವತವೆಂಬ ಆನೆಯನ್ನೂ, -ಪಾರಿಜಾತವೃಕ್ಷವನ್ನೂ, ಉಚ್ಚೈಶ್ರವಸ್ ಎನ್ನುವ ಕುದುರೆಯನ್ನೂ, ಬ್ರಹ್ಮನಿಂದ ಹಂಸಯುಕ್ತವಾದ ವಿಮಾನವನ್ನೂ, ಸಮುದ್ರರಾಜನಿಂದ ಬಾಡದ ಕಿಂಜಲ್ಕಿನೀ ಎಂಬ ಮಾಲೆಯನ್ನೂ, ಕಾಂಚನವನ್ನು ಹರಿಸುವ ಛತ್ರಿಯನ್ನು ವರುಣನಿಂದಲೂ, ಪ್ರಜಾಪತಿಯಿಂದ ಈ ಶ್ರೇಷ್ಠವಾದ ರಥವನ್ನೂ ಹೊಂದಿರುವೆ. ಯಮನಿಂದ ಮೃತ್ಯು ಪಾಶವನ್ನು ಅಪಹರಿಸಿರುವೆ. ಅಗ್ನಿಯಿಂದ ಶುಚಿಯಾದ ವಸ್ತ್ರಗಳನ್ನು ಧರಿಸಿರುವೆ ಹೀಗಿರುವಾಗ ಆ ಸುಂದರ ರಮಣಿಯನ್ನು ನೀನು ಏಕೆ ತರಲಿಲ್ಲ ? ಎಂದು

ಪ್ರಶ್ನಿಸಿದರು.

ಚಂಡಮುಂಡರ ಮಾತಿನಿಂದ ಪ್ರೇರಿತನಾಗಿ ಶುಂಭನು ಸುಗ್ರೀವನೆಂಬ ಮಹಾ ಅಸುರನನ್ನು ದೇವಿಯ ಬಳಿಗೆ ಕಳುಹಿಸಿದನು. ಅವನು ದೇವಿಯ ರೂಪವನ್ನು ಹೊಗಳಿ ಶುಂಭನನ್ನಾಗಲೀ ನಿಶುಂಭನನ್ನಾಗಲೀ ಸೇವಿಸುವಂತೆ ಕೇಳಿದನು. ದೇವಿಯು ಅಂತರಂಗದಲ್ಲಿ ನಗುತ್ತಾ ಆ ರಾಕ್ಷಸನನ್ನು ಕುರಿತು ಎಲೈ ಅಲ್ಪಮತಿಯೇ ನೀನು ಹೇಳಿದುದೆಲ್ಲವೂ ಸರಿ ಆದರೆ ನನ್ನದೊಂದು ಪ್ರತಿಜ್ಞೆ ಇರುವುದು "ಯಾರು ಯುದ್ಧದಲ್ಲಿ ನನ್ನನ್ನು ಜಯಿಸುವನೋ ಅವನೇ ನನ್ನ ಪತಿಯಾಗತಕ್ಕವನು"ಎಂದು ಯುದ್ಧದ ಆಹ್ವಾನವನ್ನು ನೀಡಿದಳು. ಆಗ ದೂತನು ತನ್ನ ಪ್ರಭುವು ಮಹಾ ಪರಾಕ್ರಮಶಾಲಿ ಎಂದೂ, ಎದುರಿಸುವುದು ಸರಿ ಇಲ್ಲವೆಂದೂ ತಿಳಿಸಿ ಹೇಳಿದನು. ಆಗ ದೇವಿಯು ನಿನ್ನ ರಾಕ್ಷಸನಿಗೆ ವಿವರವನ್ನು ಅರಹು ಎಂದು ಹಿಂದಿರಿಗಿಸಿದಳು

ಇತ್ತ ದೂತನ ಮಾತನ್ನು ಕೇಳಿದ ಶುಂಭನು ಕೋಪದಿಂದ ತನ್ನ ಸೈನ್ಯಾಧಿಪತಿಯಾದ ಧೂಮ್ರಲೋಚನನ್ನು ಅರವತ್ತು ಸಹಸ್ರ ಸೈನಿಕರೊಂದಿಗೆ ಹಿಮಾಲಯದತ್ತ ಕಳುಹಿಸಿದನು. ಅವನು ದೇವಿಯನ್ನು ಸಮೀಪಿಸಿ ಅಹಂಕಾರದಿಂದ ಮಾತನಾಡುತ್ತಿದ್ದಂತೆಯೇ ಅವನನ್ನು ಹುಂಕಾರದಿಂದ ಭಸ್ಮಮಾಡಿದಳು. ಆಗ ದೇವಿಯ ವಾಹನವಾದ ಸಿಂಹವು ಕೋಪದಿಂದ ಅಬ್ಬರಿಸಿ ಸೈನ್ಯದ ಮೇಲೆ ಹಾರಿತು. ಸೈನ್ಯವು ಅಳಿದ ಸುದ್ದಿ ತಿಳಿದು ಆ ರಾಕ್ಷಸನು ತನ್ನ ಆಪ್ತರಾದ ಚಂಡ ಮುಂಡರನ್ನು ದೇವಿಯ ಬಳಿಗೆ ಕಳುಹಿಸಿದನು.

ಚಂಡ ಮುಂಡರು ಚತುರಂಗ ಸೈನ್ಯದಿಂದ ದೇವಿಯನ್ನು ಎದುರಿಸಿದರು. ದೇವಿಯ ಹಣೆಯಿಂದ ಕಾಳೀದೇವಿಯು ಹೊರ ಬಂದಳು. ಕಾಳಿಯ ಪೌರುಷದ ಮುಂದೆ ರಾಕ್ಷಸ ಸೇನೆಯು ಯುದ್ಧ ಮಾಡಲಾಗಲಿಲ್ಲ . ಆಗ ಚಂಡನು ದೇವಿಯನ್ನು ಎರಗಿದನು. ದೇವಿಯು ಚಂಡನನ್ನು ಕೊಂದಳು. ಅಂತೆಯೇ ಮುಂಡನನ್ನೂ ಕೊಂದಳು. ಹೀಗೆ ಚಂಡಮುಂಡರನ್ನು ಸಂಹರಿಸಿದ ಕಾಳಿಯನ್ನು 'ಚಾಮುಂಡಾ' ಎಂದು ದೇವತೆಗಳು ಸ್ತುತಿಸಿದರು.

ಶುಂಭನಿಗೆ ವಿಷಯ ತಿಳಿದು ಬಹಳ ಕೋಪದಿಂದ ಕೂಡಿ ತನ್ನ ಅತುಲವಾದ ಸೈನ್ಯದೊಂದಿಗೆ ತಾನೇ ಹೊರಟನು. ಹಂಸವಾಹಿನಿಯಾದ ದೇವಿಯು ತನ್ನ ಘಂಟಾನಾದವನ್ನು ಮಾಡಿದಳು. ದೈತ್ಯನಾದರೋ ಮಹಾ ಪರಾಕ್ರಮದಿಂದ ತನ್ನ ಸೈನ್ಯದಿಂದ ದೇವಿಯನ್ನು ಮುತ್ತಿದನು. ಬ್ರಹ್ಮ, ವಿಷ್ಣು, ಮಹೇಶ್ವರ, ಸ್ಕಂದ, ಇಂದ್ರ ಮೊದಲಾದ ಸಕಲ ದೇವತೆಗಳ ಶಕ್ತಿಯೂ ಏಕ ರೂಪವಾಗಿ ಈ ಚಂಡಿಕೆಯಲ್ಲಿ ಐಕ್ಯವಾದವು.

ಬ್ರಹ್ಮನ ಶಕ್ತಿಯ ರೂಪದಿಂದ ಹಂಸದಿಂದ ಕೂಡಿದ ವಿಮಾನದಲ್ಲಿ ಕುಳಿತು ಜಪಮಾಲಿಕೆ, ಕಮಂಡಲುಗಳನ್ನುಳ್ಳವಳಾಗಿ ಬಂದ ಅವಳನ್ನು ದೇವತೆಗಳು 'ಬ್ರಹ್ಮಾಣೀ ಎಂದು ಸ್ತುತಿಸಿದರು.

ವೃಷಭ ವಾಹನಳಾಗಿ ತ್ರಿಶೂಲಧರಿಸಿ, ದೊಡ್ಡ ಸರ್ಪಗಳನ್ನು ಆಭರಣಗಳನ್ನಾಗಿ, ಚಂದ್ರ ಕಲೆಯನ್ನು ಶಿರೋಭೂಷಣವಾಗಿ ಪ್ರತ್ಯಕ್ಷಳಾದ ದೇವಿಯನ್ನು ದೇವತೆಗಳು 'ಮಾಹೇಶ್ವರೀ ' ಎಂದು ಸ್ತುತಿಸಿದರು.

ಶಕ್ತ್ಯಾಯುಧಗಳನ್ನು ಧರಿಸಿ ನವಿಲನ್ನು ವಾಹನವನ್ನಾಗಿ ಮಾಡಿಕೊಂಡಿರುವ ಕುಮಾರಸ್ವಾಮಿಯ ರೂಪವನ್ನು ಧರಿಸಿರುವ ಆ ದೇವಿಯ ರೂಪವನ್ನು 'ಕೌಮಾರೀ' ಎಂದು ದೇವತೆಗಳು ಸ್ತುತಿಸಿದರು.

'ವೈಷ್ಣವೀ' ಶಕ್ತಿಯು ಗರುಡನ ಮೇಲೆ ಕುಳಿತು ಶಂಖ, ಚಕ್ರ, ಗದಾ, ಶಾರ್ಙ್ಗ, ಖಡ್ಗ ಇವುಗಳನ್ನು ಧರಿಸಿ ಬಂದಳು.

ಅತುಲವಾದ ಯಜ್ಞವರಾಹ ರೂಪದಿಂದ ಶ್ರೀಹರಿಯ ಶಕ್ತಿಯು 'ವಾರಾಹೀ' ರೂಪದಿಂದ ಹೊರ ಬಂದಳು.

ಸಹಸ್ರ ಕಣ್ಣುಗಳಿಂದ ಕೂಡಿದವಳಾಗಿ ಇಂದ್ರನ ಶಕ್ತಿಯಾಗಿ ಆನೆಯ ಮೇಲೆ ಕುಳಿತು, ಕೈಯಲ್ಲಿ ವಜ್ರಾಯುಧವನ್ನು ಹಿಡಿದವಳಾಗಿ ಇಂದ್ರನಂತೆ ಬೆಳಗುತ್ತಾ "ಐಂದ್ರೀ" ಯಾಗಿ ಬಂದಳು.

ಚಂಡ, ಮುಂಡರನ್ನು ಚಂಡಾಡಿದ ಅದೇ ರೂಪದಿಂದ "ಚಾಮುಂಡಾ" ಎಂಬ ನಾಮದಿಂದ ಆ ದಿವ್ಯ ಶಕ್ತಿಯು ಕಂಗೊಳಿಸಿತು.

ಈ ಎಲ್ಲಾ ಶಕ್ತಿಗಳನ್ನೂ ಆ ದೇವಿಯು ಶುಂಭ ನಿಶುಂಭರ ಬಳಿಗೆ ಹೋಗಲು ಆಜ್ಞಾಪಿಸಿದಳು. ಈ ಮಾತೃ ಗಣದಿಂದ ಕೂಡಿದ ಸೈನ್ಯವು ರಾಕ್ಷಸರನ್ನು ಪೂರ್ಣವಾಗಿ ನಾಶಮಾಡಿತು. ಆಗ ಕೋಪಗೊಂಡ ರಕ್ತ ಬೀಜನೆಂಬ ರಾಕ್ಷಸನು ಕೋಪದಿಂದ ಯುದ್ಧಕ್ಕೆ ಬಂದನು. ಆಗ ಇಂದ್ರಾಣಿಯು ಅವನನ್ನು ಹೊಡೆದಳು. ಆಗ ಅವನಂತೆ ಬಲಶಾಲಿಗಳಾದ ಮಹಾವೀರರು ಅವನ ಕೆಳಗೆ ಬಿದ್ದ ರಕ್ತಗಳ ತೊಟ್ಟುಗಳಿಂದ ಮೇಲೆದ್ದು ಬಂದರು. ಅವರು ಈ ಮಾತೃ ಗಣದೊಡನೆ ಭೀಕರವಾಗಿ ಕಾದಾಟ ಮಡಿದರು. ಐಂದ್ರಿಯ ಏಟಿನಿಂದ ಅವನ ಶಿರಸ್ಸಿನಿಂದ ಬಿದ್ದ ರಕ್ತದಿಂದ ಸಾವಿರ ಸಹಸ್ರ ವೀರರು ಹುಟ್ಟಿದರು. ವೈಷ್ಣವಿಯು ತನ್ನ ಚಕ್ರದಿಂದ ಅವನನ್ನು ಕತ್ತರಿಸಿದಳು. ಹೀಗೆ ಬಿದ್ದ ರಕ್ತದಿಂದ ಪ್ರಪಂಚವೆಲ್ಲವು ಅವನಂತೆ ಬಲಶಾಲಿಗಳಾದ ರಾಕ್ಷಸರಿಂದ ತುಂಬಿಹೋಯಿತು. ಮಾತೃಕೆಯರು ಅವರನ್ನು ಸೆಣಸಿದರು. ದೇವತೆಗಳು ಆ ರಾಕ್ಷಸ ಶಕ್ತಿಯನ್ನು ನೋಡಿ ಭಯ ಭೀತರಾದರು. ಆಗ ದೇವತೆಗಳು 'ಚಾಮುಂಡಿ'ಯನ್ನು ಕುರಿತು ಹೇ ದೇವಿ ನಿನ್ನ ವಿಸ್ತಾರವಾದ ಬಾಯಿಯಿಂದ ಈ ರಾಕ್ಷಸನ ರಕ್ತವನ್ನು ಹೀರಿಬಿಡು ಇದರಿಂದ ಅವನ ರಕ್ತ ಧರೆಗೆ ಬೀಳುವುದು ತಪ್ಪುವುದೆಂದು ಪ್ರಾರ್ಥಿಸಿದರು. ಅದರಂತೆ ಕಾಳಿಯ ರೂಪದಿಂದ ದೇವಿಯು ಅವನ ರಕ್ತವನ್ನು ಕುಡಿದಳು. ಇತ್ತ ಚಂಡಿಕೆಯು ಆತನ ರಕ್ತವು ಸುರಿಯದಂತೆ ಹೊಡೆಯುತ್ತಿದ್ದಳು. ಅವನ ರಕ್ತವು ಹೊರ ಬೀಳದಂತೆ ಚಾಮುಂಡಿಯು ಅದನ್ನು ಕುಡಿದು ಬಿಡುತ್ತಿದ್ದಳು. ರಕ್ತಬೀಜನು ರಕ್ತಹೀನನಾದನು. ಇದನ್ನು ನೋಡಿ ದೇವತೆಗಳು ಸಂತೋಷದಿಂದ ದೇವಿಯ ಮಾತೃ

ರೂಪಗಳನ್ನು ಬಹುವಾಗಿ ಸ್ತುತಿಸಿದರು.

ರಕ್ತಬೀಜನ ಸಂಹಾರದಿಂದ ಬಹು ಕುಪಿತರಾದ ಶುಂಭ-ನಿಶುಂಭರು ದೇವಿಯನ್ನು ಸಂಹರಿಸಲು ಮುಂದೆ ಬಂದರು. ಅದನ್ನು ನೋಡಿದ ದೇವಿಯು ಮಾತೃಗಣದಿಂದ ಕೂಡಿದ ಚಂಡಿಕೆಯನ್ನು ಸಂಹರಿಸಲು ಮುಂದೆ ಬಂದರು. ದೇವಿಯ ವಾಹನಗಳನ್ನು ತಮ್ಮ ಆಯುಧಗಳಿಂದ ಗಾಯ ಗೊಳಿಸಿದರು. ಇದರಿಂದ ಕೋಪಗೊಂಡ ಮಾತೃಕೆಯರು ತಮ್ಮ ಶರವರ್ಷದಿಂದ ತಡೆದರು. ದೇವಿಯರ ಪರಾಕ್ರಮದ ಮುಂದೆ ಏನೂ ಮಾಡಲಾಗದೆ ನಿಶುಂಭನು ಮಡಿದನು. ದೇವಿಯು ಭಯಂಕರವಾಗಿ ಶಂಖನಾದ ಮಾಡಿದಳು. ಶುಂಭನನ್ನು ತನ್ನ ತ್ರಿಶೂಲದಿಂದ ಇರಿದಳು. ಆಗ ಅವನಷ್ಟೇ ಬಲಶಾಲಿಗಳಾದ ದೈತ್ಯರು ಏಕ ಕಾಲದಲ್ಲಿ ಹುಟ್ಟಿಬಂದು ಅವನ ಪರಾಕ್ರಮಕ್ಕೆ ಸರಿಸಮನಾಗಿ ದೇವಿಯ ಮೇಲೆ ಎರಗಿದರು. ಬ್ರಹ್ಮಾಣಿಯು ತನ್ನ ಮಂತ್ರ ಜಲದಿಂದ ಅವರು ಪುನಃ ಹುಟ್ಟಿ ಬರದಂತೆ ಮಾಡಿದಳು ಮಾಹೇಶ್ವರಿಯು ಅವರನ್ನು ತ್ರಿಶೂಲದಿಂದ ಸಂಹರಿಸಿದಳು. ಕುಮಾರಿಯ ಶಕ್ತಿಯಿಂದ ಅವರು ಅಶಕ್ತರಾದರು. ವೈಷ್ಣವೀ ಶಕ್ತಿಯಿಂದ ಅವರು ಬಲಹೀನರಾದರು. ವಾರಾಹಿಯಾಗಿ ಅವಳು ಅವರನ್ನು ಸೀಳಿದಳು. ಇಂದ್ರಾಣಿಯಾಗಿ ಅವಳ ವಜ್ರಾಯುಧದಿಂದ ಅವರು ಸೀಳಲ್ಪಟ್ಟರು. ಚಾಮುಂಡಿಯಿಂದ ಅವರು ಸಂಪೂರ್ಣ ಹತರಾದರು.

ನಿಶುಂಭನು ಮರಣಹೊಂದಿದುದನ್ನು ನೋಡಿದ ಶುಂಭನು ಬಹಳ ಕೋಪೋದ್ರಿಕ್ತನಾದನು ಅವನು " ಎಲೈ ದುರ್ಗೆಯೇ ಗರ್ವದಿಂದ ಬೀಗುತ್ತಿರುವೆಯಾ? ನೀನು ಅತಿಯಾದ ಬಲವುಳ್ಳವಳು ಇತರರ ಬಲವನ್ನು ಅವಲಂಬಿಸಿ ಯುದ್ಧ ಮಾಡುತ್ತಿರುವೆಯಲ್ಲವೇ ? " ಎಂದು ಪ್ರಶ್ನಿಸಿದನು. ಆಗ ದೇವಿಯು ನಗುತ್ತಾ ಹೀಗೆ ಉತ್ತರಿಸಿದಳು " ಈ ಜಗತ್ತಿನಲ್ಲಿ ನಾನೊಬ್ಬಳೇ ಇರುತ್ತೇನೆ. ನನಗೆ ಎರಡನೆಯವರಾಗಿ ಯಾರಿದ್ದಾರೆ ? ಎಲೈ ದುಷ್ಟನೇ ನನ್ನ ಮಹಿಮಾಶಕ್ತಿಗಳೆಲ್ಲವೂ ನನ್ನನ್ನು ಪ್ರವೇಶಿಸುವುದನ್ನು ನೋಡು " ಎಂದಳು. ಅನಂತರ ಬ್ರಹ್ಮಾಣಿ ಮೊದಲಾದ ಮಾತೃಕೆಯರು ದೇವಿಯ ಶರೀರವನ್ನು ಪ್ರವೇಶಿಸಿ ಬಿಟ್ಟರು.

ದೇವಿಯು ಶುಂಭನೊಡನೆ ಯುದ್ಧಕ್ಕೆ ತೊಡಗಿದಳು. ಶುಂಭನಾದರೋ ಬಹು ಪರಾಕ್ರಮಶಾಲಿ ಅವನು ನೆಲದ ಮೇಲೆ ಯುದ್ಧ ಮುಗಿಸಿ ಅಂತರಿಕ್ಷದಲ್ಲಿ ಯುದ್ಧ ಮಾಡತೊಡಗಿದನು. ದೇವಿಯು ಯಾವುದೇ ಆಧಾರವಿಲ್ಲದೇ ಅಂತರಿಕ್ಷದಿಂದ ಯುದ್ಧ ಮಾಡ ತೊಡಗಿದಳು. ದೇವಿಯ ಅಸ್ತ್ರದಿಂದ ಶುಂಭನು ಮರಣ ಹೊಂದಿದನು. ರಾಕ್ಷಸರ ವಧೆಯಿಂದಾಗಿ ದೇವತೆಗಳು ಬಹಳ ಸಂತೋಷ ಪಟ್ಟರು. ಗಂಧರ್ವರು ಮಧುರ ಗಾಯನ ಮಾಡಿದರು. ಅಪ್ಸರೆಯರು ನರ್ತನ ಮಾಡಿದರು. ದುಷ್ಟರನ್ನು ನಿಗ್ರಹಿಸಿದ ನಂತರ ದೇವಿಯು ಶಾಂತಳಾದಳು.

ಹೀಗೆ ರಾಕ್ಷಸರು ನಾಶವಾದನಂತರ ದೇವತೆಗಳು ದೇವಿಯನ್ನು ಪ್ರಾರ್ಥಿಸ ತೊಡಗಿದರು.

ಯಾರು ಏಕಾಗ್ರ ಚಿತ್ತದಿಂದ ದೇವಿಯನ್ನು ಸ್ತುತಿಸುವರೋ ಅವರ ಪೀಡೆಗಳೆಲ್ಲವೂ ತೊಲಗುವುವು. ಅವರು ಶತ್ರುಭಯದಿಂದ ದೂರವಾಗುವವರಾಗುತ್ತಾರೆ. ಯಾರು ಏಕಾಗ್ರ ಚಿತ್ತದಿಂದ ಮನನ ಮಾಡುವರೋ ಅವರು ಎಲ್ಲಾ ಉಪದ್ರವಗಳಿಂದ ಬಿಡುಗಡೆ ಹೊಂದುವರು. ದೇವಿಯ ಸ್ತೋತ್ರವನ್ನು ಪಠಣ ಮಾಡುವವರು ಸರ್ವ ಸಂಕಟಗಳಿಂದ ಮುಕ್ತರಾಗುತ್ತಾರೆ ಎಂದು ಹಲವಾರು ರೀತಿಯಿಂದ ಪ್ರಾರ್ಥನೆ ಮಾಡುತ್ತಿರುವಂತೆಯೇ ದೇವಿಯು ಅಂತರ್ಧಾನಳಾದಳು.

ದೇವತೆಗಳು ಸಂತಸದಿಂದ ಅವಳ ಗುಣಗಾನ ಮಾಡ ತೊಡಗಿದರು. ಹೇ ದೇವಿಯೇ ನೀನು ಅವತರಿಸಿ ನಮ್ಮನ್ನು ಉದ್ಧರಿಸಿರುವೆ. ನಿನ್ನ ಶಕ್ತಿಯಿಂದಲೇ ಈ ಪ್ರಪಂಚವು ಉತ್ಪನ್ನವಾಗಿದೆ. ಬೇಡಿದವರಿಗೆ ಬೇಡಿದುದನ್ನು ನೀಡುವವಳಾಗಿರುವೆ. ಸನಾತನಿಯಾದ ನೀನೇ ಹುಟ್ಟು, ಸಾವುಗಳಿಗೆ ಕಾರಣಳಾಗಿರುವೆ. ಯಾರು ನಿನ್ನ ಸ್ತೋತ್ರ ಮಾಡುತ್ತಾ ಪುಷ್ಪ, ಧೂಪ, ಗಂಧ ಮೊದಲಾದವುಗಳಿಂದ ಪೂಜಿಸಿದವರಿಗೆ ಐಶ್ವರ್ಯವನ್ನೂ , ಸತ್ಪುತ್ರರನ್ನೂ, ಧರ್ಮಬುದ್ಧಿಯನ್ನು ಅನುಗ್ರಹಿಸುವವಳಾಗಿರುವೆ ಎಂದು ಬಾರಿ ಬಾರಿಗೂ ಸ್ತುತಿಸತೊಡಗಿದರು.

ಹೀಗೆ ದೇವೀಮಾಹಾತ್ಮ್ಯೆಯನ್ನು ಅರಿತ ಸುರಥನು ದೇವಿಯನ್ನು ಪ್ರಾರ್ಥಿಸಿದನು. ಇದರಿಂದ ಅವನು ಸೂರ್ಯನಿಂದ ಜನ್ಮವನ್ನು ಪಡೆದು ಮುಂದೆ ಸಾವರ್ಣಿ ಎಂಬ ಮನುವಾದನು.*

*(ಮಾರ್ಕಂಡೇಯ ಪುರಾಣದ ದೇವೀಮಾಹಾತ್ಮ್ಯೆಯಲ್ಲಿ ಸುರಥ - ವೈಶ್ಯರಿಗೆ ವರಪ್ರಧಾನ ಎಂಬ ಭಾಗದಿಂದ ಸಂಕ್ಷಿಪ್ತಗೊಳಿಸಲಾಗಿದೆ.)*



* (ಮಾರ್ಕಂಡೇಯ ಪುರಾಣದಲ್ಲಿ ದೇವೀಮಾಹಾತ್ಮ್ಯೆಯು ಎಪ್ಪತ್ತೆಂಟನೆಯ ಅಧ್ಯಾಯದಿಂದ ತೊಂಬತ್ತನೆಯ ಅಧ್ಯಾಯದವರೆವಿಗೆ ಹದಿಮೂರು ಅಧ್ಯಾಯಗಳವರೆವಿಗೆ ವಿವರಿಸಲಾಗಿದೆ. ಯುದ್ಧದ ವರ್ಣನೆಯನ್ನು ಬಹು ವಿಸ್ತಾರವಾಗಿ ವಿವರಿಸಿರುತ್ತಾರೆ. ಈ ಸಂಕ್ಷಿಪ್ತ ಆವೃತ್ತಿಯಲ್ಲಿ ಆ ಭಾಗವನ್ನು ಬಹು ಸಂಕ್ಷಿಪ್ತಗೊಳಿಸಲಾಗಿದೆ. ಆಸಕ್ತ ಭಕ್ತರು ಮೂಲವನ್ನು ಓದಿ ದೇವೀಮಾಹಾತ್ಮ್ಯೆಯನ್ನು ಪಠಿಸಬೇಕಾಗಿ ಕೋರಿದೆ. ದೇವಿಯ ಸ್ತೋತ್ರ ರೂಪವಾದ ಶ್ಲೋಕಗಳನ್ನು ಉದಾಹರಿಸಲಾಗಿದೆ. ಭಕ್ತಿ ಪ್ರಧಾನ ಭಾಗವನ್ನು ಮೂಲಸಹಿತ ಆರಿಸಿ ಸಂಕ್ಷಿಪ್ತ ಭಾಗವನ್ನು ಕೊಡಲಾಗಿದೆ. ಸ್ತೋತ್ರಗಳು ದೇವಿಯ ಮಹಿಮೆಯನ್ನು ವರ್ಣಿಸುವುದರಿಂದ ಭಕ್ತರು ಶ್ರದ್ಧೆಯಿಂದ ಓದುವರೆಂದು ಆಶಿಸಲಾಗಿದೆ.)

## ಅಧ್ಯಾಯ ೮

# ಶ್ರೀ ಸಪ್ತಮಾತೃಕಾಕ್ಷೇತ್ರ - ಕಮಲವಾಟಿಕಾ

ಕಮರವಾಡಿ, ಚಾಮರಾಜನಗರಜಿಲ್ಲೆ, ಕರ್ನಾಟಕ

ಶ್ರೀ ಸಪ್ತಮಾತೃಕಾಧ್ಯಾನಮ್
(ಮಾರ್ಕಂಡೇಯ ಪುರಾಣೋಕ್ತ ಎಂಟನೆಯ ಅಧ್ಯಾಯದಿಂದ )

## ಅಥ ಬ್ರಾಹ್ಮೀ ದೇವತಾ



೧) ಹಂಸಯುಕ್ತಾವಿಮಾನಾಗ್ರೇ ಸಾಕ್ಷಸೂತ್ರಕಮಂಡಲುಃ |
ಆಯಾತಾ ಬ್ರಹ್ಮಣಶ್ಶಕ್ತಿರ್ಬ್ರಹ್ಮಾಣೀ ಸಾಽಭಿಧೀಯತೇ ||

ಬ್ರಹ್ಮನ ಶಕ್ತಿಯು ಹಂಸದಿಂದ ಕೂಡಿದ ವಿಮಾನದಲ್ಲಿ ಕುಳಿತು ಜಪಮಾಲಿಕೆ-ಕಮಂಡಲುಗಳುಳ್ಳವಳಾಗಿ ಬಂದವಳು ಬ್ರಹ್ಮಾಣಿ.

## ಅಥ ಮಾಹೇಶ್ವರೀ ದೇವತಾ



೨) ಮಾಹೇಶ್ವರೀ ವೃಷಾರೂಢಾ ತ್ರಿಶೂಲವರಧಾರಿಣೀ |
ಮಹಾಹಿವಲಯಾ ಪ್ರಾಪ್ತಾ ಚಂದ್ರರೇಖಾವಿಭೂಷಣಾ ||

ವೃಷಭವಾಹನಳಾಗಿ ಶ್ರೇಷ್ಠವಾಧ ತ್ರಿಶೂಲವನ್ನೂ ಧರಿಸಿ ದೊಡ್ಡ ಸರ್ಪಗಳನ್ನೂ ಆಭರಣಗಳನ್ನಾಗಿ ಹೊಂದಿ ಚಂದ್ರಕಲೆಯನ್ನು ಧರಿಸಿರುವವಳು ಮಾಹೇಶ್ವರಿ.

## ಅಥ ಕೌಮಾರೀ ದೇವತಾ



೩) ಕೌಮಾರೀ ಶಕ್ತಿಹಸ್ತಾ ಚ ಮಯೂರವರವಾಹನಾ |
ಯೋದ್ಧುಮಭ್ಯಾಯಯೌ ದೈತ್ಯಾನಂಬಿಕಾ ಗುಹರೂಪಿಣೀ ||

ಶಕ್ತ್ಯಾಯುಧವನ್ನು ಕರದಲ್ಲಿ ಧರಿಸಿರುವ, ಶ್ರೇಷ್ಠವಾದ ನವಿಲನ್ನು ವಾಹನವಾಗಿ ಹೊಂದಿರುವ, ಕುಮಾರ ಸ್ವಾಮಿಯ ರೂಪವನ್ನುಳ್ಳವಳು ಕೌಮಾರೀ.

## ಅಥ ವೈಷ್ಣವೀದೇವತಾ



೪) ತಥೈವ ವೈಷ್ಣವೀಶಕ್ತಿರ್ಗರುಡೋಪರಿಸಂಸ್ಥಿತಾ |
ಶಂಖಚಕ್ರಗದಾಶಾರ್ಙ್ಗೀ ಖಡ್ಗ ಹಸ್ತಾಽಭ್ಯುಪಾಯಯೌ ||

ಹಾಗೆಯೇ ವೈಷ್ಣವಿಯೂ ಗರುಡನ ಮೇಲೆ ಕುಳಿತು ಶಂಖ, ಗದಾ, ಶಾರ್ಙ್ಗ ಖಡ್ಗ - ಇವುಗಳನ್ನು ಧರಿಸಿರುವಳು.





## ಅಥ ವಾರಾಹೀದೇವತಾ



೫) ಯಜ್ಞವಾರಾಹಮತುಲಂ ರೂಪಂ ಯಾ ಬಿಭ್ರತೋ ಹರೇಃ |
ಶಕ್ತಿಸ್ಸಾऽಪ್ಯಾಯಯೌ ತತ್ರ ವಾರಾಹೀಂ ಬಿಭ್ರತೀಂ ತನೂಮ್ ||

ಅತುಲವಾದ ಯಜ್ಞವರಾಹರೂಪವನ್ನು ಪಡೆದಂಥ ಶ್ರೀಹರಿಯ ಯಾವ ಶಕ್ತಿಯಿತ್ತೋ ಅವಳು ವಾರಾಹಿಯಾಗಿ ಅವತರಿಸಿದಳು.

## ಅಥ ಐಂದ್ರೀದೇವತಾ



೬) ವಜ್ರಹಸ್ತಾ ತಥೈವೈಂದ್ರೀ ಗಜರಾಜೋಪರಿಸ್ಥಿತಾ |
ಪ್ರಾಪ್ತಾ ಸಹಸ್ರನಯನಾ ಯಥಾಶಕ್ರಸ್ತಥೈವ ಸಾ ||

ಸಾವಿರ ಕಣ್ಣುಳ್ಳ ಐಂದ್ರಿಯೂ ಕೂಡ ಆನೆಯ ಮೇಲೆ ಕುಳಿತು ಕೈಯಲ್ಲಿ ವಜ್ರಾಯುಧವನ್ನು ಹಿಡಿದು ಇಂದ್ರನಂತೆ ರಾರಾಜಿಸುತ್ತಿದ್ದಳು.

## ಅಥ ಚಂಡಿಕಾದೇವತಾ



೭). ತತೋ ದೇವೀ ಶರೀರಾತ್ತು ವಿನಿಷ್ಕ್ರಾಂತಾಽತಿಭೀಷಣಾ |
ಚಂಡಿಕಾ ಶಕ್ತಿರತ್ಯುಗ್ರಾ ಶಿವಾ ಶತನಿನಾದಿನೀ ||

ದೇವಿಯ ಶರೀರದಿಂದ ಅತ್ಯುಗ್ರಳೂ ಅತಿ ಭಯಂಕರಳೂ ಆದ ನೂರಾರು ನರಿಗಳ ಕೂಗಿನಿಂದ ಕೂಡಿದ ಚಂಡಿಕೆಯು ಅವತರಿಸಿದಳು.

ದಕ್ಷಿಣ ಭಾರತದ ನದಿಗಳೂ, ಪರ್ವತಗಳೂ, ಸದಾಕಾಲ ಸಂಪದ್ಭರಿತವಾಗಿದ್ದು ಋಷಿ ಮುನಿಗಳ, ತ್ಯಾಗಿಗಳ, ಮಹಾಮುನಿಗಳ, ಮಹಾಮಹಿಮರ ಜನ್ಮಸ್ಥಳವಾಗಿ ವಿಜೃಂಭಿಸಿದೆ. ಗೋದಾವರಿ, ಕೃಷ್ಣ, ಕಾವೇರಿ ಮೈದೋರಿರುವ ಈ ಸಮೃದ್ಧ ಸಂಪತ್ತು ದೈವೀ ಶಕ್ತಿಯ ಧ್ಯಾನದೇಗುಲ, ಕೃತ, ತ್ರೇತಾ, ದ್ವಾಪರ ಯುಗಗಳಲ್ಲಿ ಬದುಕಿ ತಪಗೈದ ಮುನಿ ಶ್ರೇಷ್ಠರಲ್ಲಿ ಬಹು ಮಂದಿ ಈ ಭುವಿಯಲ್ಲಿ ತಮ್ಮ ತಪದ ತಾಣವನ್ನು ಕಂಡುಕೊಂಡಿದ್ದರು. ಅಗಸ್ತ್ಯ, ವಿಭಾಂಡಕ, ಋಷ್ಯಶೃಂಗ, ಮಾಂಡೂಕ್ಯ, ಮತಂಗ ಮೊದಲಾದ ಮುನಿಗಳ ನೆಲೆವೀಡು ಈ ದಕ್ಷಿಣವೀಡು.

ಕೊಡಚಾದ್ರಿ, ಸಹ್ಯಾದ್ರಿ, ಶ್ವೇತಾದ್ರಿ ಮೊದಲಾದ ಸುಂದರಪರ್ವತಗಳಿಂದ ಪರಿಶೋಭಿತಳಾದ ಪ್ರಕೃತಿ ತಾಪಸಿಗರಿಗೆ ಸುಂದರ ತಾಣವನ್ನು ಎಲ್ಲಿ ಬೇಕೆಂದರೆ ಅಲ್ಲಿ ನೀಡಿದ್ದಾಳೆ. ಆದುದರಿಂದಲೇ ಒಂದೊಂದು ಭೂಪ್ರದೇಶವೂ ಒಂದೊಂದು ಪುಣ್ಯಕ್ಷೇತ್ರ. ಹಾಗೆ ಕಂಡು ಬರುವ ಕ್ಷೇತ್ರಗಳಲ್ಲಿ ಕಮಲವಾಟಿಕಾ ಕಮರವಾಡಿ, ಮೈಸೂರು ತಿರುಮುಕ್ಕೂಡಲು ನರಸೀಪುರ ಚಾಮರಾಜನಗರದ ಮಾರ್ಗದಲ್ಲಿದೆ. ದೇವೀ ಕ್ಷೇತ್ರಗಳಲ್ಲಿ ಬಹು ಪ್ರಧಾನವಾದುದು.

ಕಮಲವಾಟಿಕಾ ಕ್ಷೇತ್ರದ ಆಸುಪಾಸಿನ ಪ್ರದೇಶಗಳಲ್ಲಿ ಕೆಲವೆಡೆ ನಾವು ಸಪ್ತಮಾತೃಕೆಯರ ದೇವಾಲಯಗಳನ್ನೂ ಕಾಣಬಹುದಾಗಿದೆ. ಪುರಾಣಗಳಲ್ಲಿಯೂ, ಶಾಸ್ತ್ರಗಳಲ್ಲಿಯೂ ಉಕ್ತವಾಗಿರುವಂತೆ ಪೂರ್ಣಸ್ವರೂಪದಲ್ಲಿ ಕಂಗೊಳಿಸುವುದು ಕಮಲವಾಟಿಕಾಪುಣ್ಯಕೇತ್ರದಲ್ಲಿ ಮಾತ್ರ. ವಿಖ್ಯಾತವಾದ ನಂಜನಗೂಡಿನ ಶ್ರೀಕಂಠೇಶ್ವರಸ್ವಾಮಿ ದೇವಾಲಯದ ಹೊರವಲಯದಲ್ಲಿ ಉತ್ತರದ ದಿಸೆಯಲ್ಲಿ ಈಶಾನ್ಯದಿಕ್ಕಿಗೆ ಹೊಂದುವಂತೆ ಸಪ್ತಮಾತೃಕೆಯರನ್ನು ಕಾಣಬಹುದಾಗಿದೆ. ಬಹಳ ಸಮೀಪದ ಸುತ್ತೂರಿನಲ್ಲಿಯೂ ಸಪ್ತಮಾತೃಕೆಯ ವಿಗ್ರಹಗಳನ್ನು ಕಾಣಬಹುದು. ಬೇಲೂರಿನ ಶಿಲ್ಪಕಲೆಯಲ್ಲಿ ಸಪ್ತಮಾತೃಕೆಯರು ವಿಜೃಂಭಿಸುತ್ತಾರೆ. ಎಲ್ಲೋರಾದ ಗುಹಾಂತರ್ಗತ ದೇವಾಲಯಗಳಲ್ಲಿಯೂ, ಕಾಳಹಸ್ತಿಯ ಶಿವದೇವಾಲಯ ದಲ್ಲಿಯೂ, ದಕ್ಷಿಣದ ತುದಿ ರಾಮೇಶ್ವರದ ಬೃಹತ್ ದೇವಾಲಯ ಹಾಗೆ ಎಲ್ಲೆಲ್ಲಿ ಅಂದರೆ ಅಲ್ಲಿ ದೇವಿಯ ದರ್ಶನ ಪಡೆಯ ಬಹುದಾಗಿದೆ.

ಈ ಎಲ್ಲಾ ದೇವಾಲಯಗಳಲ್ಲಿಯೂ ದೇವಿಯುನ್ನು ಕೇವಲ ಪಾರ್ಶ್ವದೇವತೆಯಾಗಿ ದರ್ಶನ ಪಡೆಯಬಹುದೇ ಹೊರತು ಪ್ರಧಾನ ದೇವತೆಯಾಗಿ ದರ್ಶನ ಪಡೆಯಲು ಸಾಧ್ಯವಿಲ್ಲ. ಪ್ರಧಾನ ದೇವತೆಗಳು ಆಯಾಯ ಕ್ಷೇತ್ರದ ಹಿರಿಯ ದೇವತೆಗಳಾಗಿದ್ದಾರೆ ಆದರೆ ಕಮಲವಾಟಿಕಾದಲ್ಲಿ ನೆಲೆಸಿರುವ ದೇವಿಯು ಇಲ್ಲಿ ಪ್ರಧಾನ ದೇವತೆ. ಇಂತಹ ಪವಿತ್ರಸ್ಥಳ ಭಾರತದಲ್ಲಿ ಬೇರೆಡೆ ಎಲ್ಲೂ ಕಾಣಸಿಗದು. ಆದುದರಿಂದ ಅಖಂಡ ಭಾರತದಲ್ಲಿ ಇದಕ್ಕೊಂದು ಹಿರಿಯ ಸ್ಥಾನವಿದೆ.

ಸಾಧಾರಣವಾಗಿ ದೇವಾಲಯಗಳಲ್ಲಿ ಸಪ್ತಮಾತೃಕೆಯರ ಪೀಠವನ್ನು ಚಿತ್ರದಲ್ಲಿ ತೋರಿಸಿರುವಂತೆ ಕಾಣುತ್ತೇವೆ. ಇದು ವಿಶ್ವ ವ್ಯಾಪಿಯಾಗಿರುವ ಪೀಠ. ಧರ್ಮಸ್ಥಳದ ಮಂಜುನಾಥಸ್ವಾಮಿ ದೇವಾಲಯದಲ್ಲಿಯೂ, ಶೃಂಗೇರಿಯ ವಿದ್ಯಾಶಂಕರ

ದೇವಾಲಯ ದಕ್ಷಿಣ ದಿಸೆಯಲ್ಲಿಯೂ, ಕೇರಳದ ಗುರುವಾಯೂರಿನ ಶ್ರೀಕೃಷ್ಣ ದೇವಾಲಯದಲ್ಲಿಯೂ, ಮತ್ತು ದೇಶದ ಎಲ್ಲೆಡೆ ಇದೇ ರೀತಿಯ ಪೀಠಗಳನ್ನು ನಾವು ಕಾಣುತ್ತೇವೆ. 1 ರಿಂದ 7 ರವರೆವಿಗೆ ಸಪ್ತಮಾತೃಕೆಯರನ್ನು ಪ್ರತಿನಿಧಿಸುತ್ತವೆ.




(ಅ) ಮತ್ತು (ಆ)ಗಳು ವಿನಾಯಕ ಮತ್ತು ಕಾಲಭೈರವನ ಪೀಠಗಳನ್ನು ಪ್ರತಿನಿಧಿಸುತ್ತವೆ. ಇದು ಅಖಂಡ ಭಾರತದಲ್ಲಿ ಕಾಣುವ ಸುಂದರ ಚಿತ್ರ. ಇಂತಹ ಪಾರಂಪರಿಕವಾಗಿ ದೊರೆಯುವ ರಚನೆಯನ್ನು ನಾವು ಕಮಲವಾಟಿಕಾದಲ್ಲಿರುವ ಶ್ರೀ ಸಪ್ತಮಾತೃಕೆಯರ ಸನ್ನಿಧಿಯಲ್ಲಿ ಕಾಣುತ್ತೇವೆ. ಇದು ಅಖಂಡ ಭಾರತದಲ್ಲಿ ಏಕೈಕ ರಚನೆ ಬಹು ಅಪೂರ್ವವಾದುದು.

ಬ್ರಾಹ್ಮೀ ಮಾಹೇಶ್ವರೀ ಚೈವ ಕೌಮಾರೀ ವೈಷ್ಣವೀ ತಥಾ |
ವಾರಾಹೀ ಚೈವ ಚೇಂದ್ರಾಣೀ ಚಾಮುಂಡಾ ಸಪ್ತ ಮಾತರಃ ||



ಕಮಲವಾಟಿಕಾದಲ್ಲಿ ನೆಲೆಸಿರುವ ಶ್ರೀ ಸಪ್ತಮಾತೃಕೆಯರು

ಸಪ್ತಮಾತೃಕೆಯರ ಬಲಮುಂಭಾಗದಲ್ಲಿ ಆ ವಿನಾಯಕನನ್ನು ಕಾಣುತ್ತೇವೆ. ಎಡಮುಂಭಾಗದಲಿ, ಆ ಕಾಲಭೈರವನನ್ನು ಕಾಣುತ್ತೇವೆ. ಉಳಿದ ದೇವಾಲಯಗಳಂತೆ ಇದು ದ್ವಾರಪಾಲಕರಾಗಿರದೆ ಪ್ರಧಾನ ದೇವತೆಗಳೇ ಆಗಿವೆ.

ಪೂರ್ವ ಅನುಸರಿಸಿರುವ ಶಾಸ್ತ್ರವಿಧಾನ ಸಂಪ್ರದಾಯವನ್ನು, ಶಿವನ ರುದ್ರ ತಾಂಡವದಿಂದಾಗಿ ದೇವಿಯ ತುಣುಕು ವಿಷ್ಣುಮಾಯೆಯಿಂದ ದೇಶದ ಎಲ್ಲೆಡೆ ಬಿದ್ದಿತು. ಹಾಗೆ ಬಿದ್ದ ಸ್ಥಳಗಳು ದೇವೀ ಕ್ಷೇತ್ರಗಳಾದವು. ಈ 51 ಕ್ಷೇತ್ರಗಳೂ ರಾಷ್ಟ್ರದ ಭಾವೈಕ್ಯಕ್ಕೆ ಭದ್ರಬುನಾದಿ ಆಗಿವೆ. ಸಾಧಾರಣವಾಗಿ ಎಲ್ಲಾ ಕ್ಷೇತ್ರಗಳನ್ನೂ ಗುರುತಿಸಿ ಅವು ಅಂತಹುದೇ ಎಂದು ಲೋಕ ಗೌರವಿಸಿದೆ. ಕೆಲವು ಕ್ಷೇತ್ರಗಳು ಮಾತ್ರ ಇನ್ನೂ ಶಾಸ್ತ್ರ ರೀತಿಯಾಗಿ ದೊರೆತಿಲ್ಲ. ಪುರಾಣಗಳಲ್ಲಿಯೂ ಇತಿಹಾಸ ಗ್ರಂಥಗಳಲ್ಲಿಯೂ ಉಕ್ತವಾಗಿರುವಂತೆ ಎಲ್ಲಾ ಲಕ್ಷಣಗಳೂ ಈ ಕ್ಷೇತ್ರದಲ್ಲಿ ಕಾಣಬರುತ್ತದೆ. ದೇವೀ ಕ್ಷೇತ್ರಗಳಲ್ಲಿ ಇದು ಒಂದು ಎಂದು ವಿದ್ವಾಂಸರು ತಮ್ಮ ಮನ್ನಣೆ ನೀಡಿ, ಪ್ರಾಜ್ಞರೂ , ಹಿರಿಯರೂ ಅದನ್ನು ಅನುಮೋದಿಸಿದರೆ ಅಖಂಡ ಭಾರತದ ಧಾರ್ಮಿಕಇತಿಹಾಸದಲ್ಲಿ ಇದು ಒಂದು ಮಹತ್ತ್ವಪೂರ್ಣ ಸ್ಥಾನವನ್ನು ಪಡೆದುಕೊಳುತ್ತದೆ. ಅಖಂಡಭಾರತದ ದೇವೀ ಕ್ಷೇತ್ರಗಳ ಭೂಪಟದಲ್ಲಿ ತನ್ನ ಸ್ಥಾನವನ್ನೂ ಗುರುತಿಸಿಕೊಳ್ಳುತ್ತದೆ . ಇದರಿಂದಾಗಿ ಭಾರತದ ಎಲ್ಲೆಡೆಯಿಂದ ಭಕ್ತಾದಿಗಳು ಆಗಮಿಸಿ ತಮ್ಮ ಜನ್ಮವನ್ನು ಸಾರ್ಥಕತೆ ಪಡಿಸಿಕೊಳ್ಳಲು ಸಾಧ್ಯವಾಗುತ್ತದೆ.

ಶೃಂಗೇರಿಯ ಮಹಿಮೆ ಬಹು ಪುರಾತನವಾದುದು ಶ್ರೀ ಆದಿಶಂಕರರು ಶಾರದೆಯನ್ನು ಪ್ರತಿಷ್ಠಾಪಿಸಿ ಅಲ್ಲಿವಿಧಿಪೂರ್ವಕವಾಗಿ ಶಾಸ್ತ್ರರೀತಿಯಲ್ಲಿ ಪೂಜಾದಿಗಳು ನಡೆದು ನಮ್ಮ ಪೂರ್ವ ಸಂಪ್ರದಾಯವು ಶಾಶ್ವತವಾಗಿ ಮುಂದುವರಿಯುವ ದಾರಿ ತೋರಿದರು. ಶ್ರೀ ಶಾರದೆಯು ರಥವು ಅಷ್ಟಕೋನಗಳಿಂದಕೂಡಿದ್ದು ಮುಖಭಾಗದಲ್ಲಿ ದೇವಿಯ ದರ್ಶನ ಮಾಡಿದರೆ ಉಳಿದ ದಿಸೆಗಳಲ್ಲಿ ಸಪ್ತಮಾತೃಕೆಯರ ದರ್ಶನ ಪಡೆಯುತ್ತೇವೆ. ಹಿಂದಿನ ಗುರುಗಳ ಕಾಲದಲ್ಲಿ ಉಪಯೋಗಿಸುತ್ತಿದ್ದ ಬೆಳ್ಳಿಯ ರಥದ ಮಾದರಿಯಲ್ಲಿಯೇ. ಈಗ ಚಿನ್ನದ ರಥ ನಿರ್ಮಾಣ ಮಾಡಿದ್ದಾರೆ, ವಿನ್ಯಾಸ ಒಂದೇ ಆಗಿದೆ. ಅದೇ ಮಾದರಿಯನ್ನು ಇಲ್ಲಿಯೂ ನಾವು ಕಾಣಬಹುದಾಗಿದೆ. ಸಪ್ತಮಾತೃಕೆಯರ ರಥದಲ್ಲಿಯೂ ಅಷ್ಟ ಕೋನಗಳಿದ್ದು, ಮುಖ ಭಾಗದಲ್ಲಿ ದೇವಿಯ ದರ್ಶನ ಪಡೆಯುತ್ತೇವೆ. ಉಳಿದ ಏಳು ದಿಸೆಗಳಲ್ಲಿ ಸಪ್ತಮಾತೃಕೆಯರು ವಿಜೃಂಭಿಸುವುದನ್ನು ಕಾಣಬಹುದಾಗಿದೆ. ಪೂರ್ವಸಂಪ್ರದಾಯವು ಇಲ್ಲಿಯೂ ಅನೂಚಾನವಾಗಿ ನಡೆದು ಬಂದಿದೆ. ಆದುದರಿಂದ ಇದು ಶಾಸ್ತ್ರಬದ್ಧವಾಗಿದೆ.

ಆದಿ ಕಾಲದಲ್ಲಿ ಇಲ್ಲಿಯೂ ಕೊಳೆಗಳಲ್ಲಿ ಕಮಲದ ಪುಷ್ಪಗಳು ಬಹಳವಾಗಿ ಬೆಳೆದು ದೇವೀ ಪೂಜಾದಿಗಳಿಗೆ ಬೇಕಾಗುವ ಪುಷ್ಪಗಳನ್ನು ಒದಗಿಸುತ್ತಿದ್ದುದರಿಂದ

ಈ ಸುಂದರ ಕಮಲಗಳ ತೋಟವನ್ನು "ಕಮಲವಾಟಿಕಾ" ಎಂದು ಋಷಿ ಪುಂಗವರು ನಾಮಕರಣಮಾಡಿರಬಹುದು. ಕಮಲವೆಂದರೆ ದೇವಿಗೆ ಬಹು ಪ್ರಿಯವಾದ ಪುಷ್ಪ ಆದುದರಿಂದಲೇ ಅವಳು ಕಮಲವಾಟಿಕಾ (ಕಮರವಾಡಿ ಎಂದಾಗಿದೆ) ದಲ್ಲಿ ನೆಲೆಸಿದ್ದಾಳೆ.

ಕಾವೇರಿ ತಟದಲ್ಲಿ ದೇವಿಯು ನೆಲೆಸಿದ್ದು ಅವಭೃತಸ್ನಾನಕ್ಕಾಗಿ ದೇವಿಯನ್ನು ಕೊಂಡೋಯ್ಯುವ ಪದ್ಧತಿಯೂ ಪುರಾತನವಾದದು. ಆದುದರಿಂದ ಶಾಸ್ತ್ರಗಳಲ್ಲಿ ವಿಧಿಸಿರುವ ವಿಧಿಗಳೆಲ್ಲವೂ ಈ ಪುಣ್ಯ ಕ್ಷೇತ್ರದಲ್ಲಿ ಕಾಣದೊರೆಯುತ್ತವೆ.

(ಶೃಂಗೇರಿ ಶಾರದಾ ಚಿನ್ನದ ರಥ )



ಪ್ರತಿ ವರ್ಷವೂ, ಮಾರ್ಚಿ ಏಪ್ರಲ್ ತಿಂಗಳಲ್ಲಿ ಬ್ರಹ್ಮೋತ್ಸವವು ಬಹು ವಿಜೃಂಭಣೆಯಿಂದ ನಡೆಯುತ್ತದೆ. ದೇವಿಯು ಸಕಲಗೌರವ, ವೇದ ಘೋಷಗಳೊಂದಿಗೆ ದಿಗ್ವಿಜಯ ಹೊರಡುವುದನ್ನು ನೋಡುವುದು ಜನ್ಮ ಸಾರ್ಥಕವಾಗುವ ಪುಣ್ಯಪ್ರದಯಾತ್ರೆ.

ಪ್ರತಿ ತಿಂಗಳೂ ಎರಡನೆಯ ಭಾನುವಾರ ದೇವಿಗೆ ವಿಶೇಷ ಪೂಜೆಗಳು ನಡೆದನಂತರ ಚಿಕ್ಕ ರಥೋತ್ಸವ ಸೇವೆಯೂ ನೆರವೇರುತ್ತದೆ. ಆ ದಿನಗಳಲ್ಲಿ ರಥದ ವಿನ್ಯಾಸವನ್ನು ಅರಿಯಬಹುದು.



ಶ್ರೀ ಸಪ್ತಮಾತೃಕಾಬ್ರಹ್ಮರಥ ಕಮಲವಾಟಿಕಾ (ಸಾಮ್ಯತೆಯನ್ನು ಗಮನಿಸಿ)

ಅಧ್ಯಾಯ - ೯

## ಶಕ್ತಿಪೀಠಗಳು

### ಜಗದ್ಗುರುಗಳ ಅನುಗ್ರಹ ಭಾಷಣ

ದೇವಿಯು ಹಲವು ರೀತಿಗಳಲ್ಲಿ ವ್ಯಕ್ತಗೊಳ್ಳುತ್ತಾಳೆ. ಭಕ್ತರು ಅದನ್ನು ತಿಳಿಯಬೇಕು. ದೇವಿಯು ಅಭಿವ್ಯಕ್ತವಾದ, ಪವಿತ್ರವಾದ ಸ್ಥಳಗಳನ್ನು ಪೀಠಗಳೆನ್ನುತ್ತೇವೆ. ಭಾರತದಲ್ಲಿ ಹಲವಾರು ಶಕ್ತಿ ಪೀಠಗಳಿವೆ. ಹೀಗೆ ಪವಿತ್ರವಾದ ಸ್ಥಳಗಳಲ್ಲಿ ದೇವಿಯನ್ನು ಪೂಜಿಸಿ ಕೋಟ್ಯಂತರ ಭಕ್ತರು ದೇವಿಯ ಆಶೀರ್ವಾದವನ್ನು ಪಡೆಯುತ್ತಾರೆ. ಪುರಾಣಗಳಲ್ಲಿ ಹಲವಾರು ರೀತಿಯಲ್ಲಿ ಈ ಶಕ್ತಿಪೀಠಗಳ ವರ್ಣನೆಯನ್ನು ಕಾಣುತ್ತೇವೆ.

ನಮ್ಮ ಬಯಕೆಗಳನ್ನು ನೆರವೇರಿಸಿಕೊಳ್ಳಲು ನಾವು ದೇವಿಯನ್ನು ಪೂಜಿಸುತ್ತೇವೆ. ಮೋಕ್ಷ ಪ್ರಾಪ್ತಿಗಾಗಿ ದೇವಿಯನ್ನು ಪೂಜಿಸುವುದು ಎಲ್ಲದಕ್ಕಿಂತ ಶ್ರೇಷ್ಠವಾದುದು. ಒಂದು ಸಾರಿ ಈ ಸಂಸಾರ ಬಂಧನದಿಂದ ಬಿಡುಗಡೆ ದೊರೆಯಿತೆಂದರೆ ಸಾಕು ಉಳಿದ ಬಯಕೆಗಳೆಲ್ಲವೂ ಇಲ್ಲವಾಗುತ್ತವೆ. ಆದುದರಿಂದ ಮೋಕ್ಷಾರ್ಥಿಯಾಗಿ ದೇವಿಯನ್ನು ಬೇಡುವುದು ಎಲ್ಲದಕ್ಕಿಂತ ಮಿಗಿಲಾದುದು.

ಆದಿ ಶಂಕರ ಮೊದಲಾದ ಹಲವಾರು ಶ್ರೇಷ್ಠರು ಇಂತಹ ಪವಿತ್ರವಾದ ಸ್ಥಳಗಳಿಗೆ ಹೋಗಿ ಆಯಾ ದೇವಿಯರ ಮೇಲೆ ಹಲವಾರು ಸ್ತೋತ್ರಮಾಲಿಕೆಗಳನ್ನೇ ರಚಿಸಿರುತ್ತಾರೆ. ನಾವು ಅಂತಹ ಪೀಠಗಳನ್ನು ಸಂದರ್ಶಿಸಿದಾಗ ಆ ಸ್ತೋತ್ರಗಳನ್ನು ಪಠಣಮಾಡಬೇಕು. ಇದರಿಂದ ಒಳ್ಳೆಯದಾಗುತ್ತದೆ. ಭಕ್ತರು ಅಂತಹ ಶಕ್ತಿ ಪೀಠಗಳನ್ನು ಸಂದರ್ಶನ ಮಾಡಿ ದೇವಿಯ ಆಶೀರ್ವಾದವನ್ನು ಪಡೆಯಲಿ.

* * * * *

ಲಕ್ಷ್ಮೀಪ್ರದಾನಸಮಯೇ ನವವಿದ್ರುಮಾಭಾಂ
ನಿದ್ಯಾಪ್ರದಾನ ಸಮಯೇ ಶರದಿಂದುಶುಭ್ರಾಮ್
ವಿದ್ವೇಷಿವರ್ಗವಿಜಯೇ ಚ ತಮಾಲನೀಲಾಂ
ದೇವೀಂ ತ್ರಿಲೋಕಜನನೀಂ ಶರಣಂ ಭಜಾಮಃ || 1

### ಶಕ್ತಿ ಪೀಠ ಮತ್ತು ಭಾವೈಕ್ಯ

ಋಗ್ವೇದದಲ್ಲಿ ಉಕ್ತವಾಗಿರುವ ದಕ್ಷಯಜ್ಞದ ಕಥೆಯು ಮುಂದೆ ಹಲವಾರು ಪುರಾಣಗಳಲ್ಲಿ ವಿಸ್ತೃತಗೊಂಡು ಬೆಳೆದಿದೆ[2] ದಕ್ಷ ಪ್ರಜಾಪತಿಯು ಯಜ್ಞವನ್ನು

1. H.H. Bharathi Teertha Swamigal, Jagadguru speaks, Tatvaloka, Nov, 94. p. - 6.
2. Dr. D.C. SARKAR "SAKTI PEETAS" - TATVALOKA. Nov. 96, p. 7

ಮಾಡಿದನು ಎಂಬ ಇತಿಹಾಸವು ಮಹಾಭಾರತದಲ್ಲಿಯೂ, ಮತ್ಸ್ಯ, ಪದ್ಮ, ಕೂರ್ಮ, ಮತ್ತುಬ್ರಹ್ಮಾಂಡ ಪುರಾಣಗಳಲ್ಲಿ ವಿವರವಾಗಿ ವಿಸ್ತೃತವಾಗಿದೆ. ಕಾಳಿದಾಸನು ಕುಮಾರ ಸಂಭವ ಎಂಬ ಕಾವ್ಯವನ್ನೇ ರಚಿಸಿರುತ್ತಾನೆ.

ಸತಿಯು ದಕ್ಷಪ್ರಜಾಪತಿಯ ಮಗಳು. ದಕ್ಷ ಪ್ರಜಾಪತಿಯು ಒಂದು ಯಜ್ಞವನ್ನು ಮಾಡಿದನು. ಆ ಯಜ್ಞಕ್ಕೆ ತನ್ನ ಮಗಳಾದ ಸತಿಯನ್ನು ಆಹ್ವಾನಿಸಲಿಲ್ಲ. ಆದರೂ ಸತಿಯು ತಂದೆಯ ಮನೆ ಎಂಬ ಭಾವನೆಯಿಂದ ಯಜ್ಞಕ್ಕಾಗಿ ಬಂದಳು. ಅವಳಿಗೆ ಅವಮಾನವಾದುದರಿಂದ ಯಜ್ಞಕುಂಡದಲ್ಲಿ ತನ್ನ ಪ್ರಾಣಾರ್ಪಣೆ ಮಾಡಿದಳು. ಪರಶಿವನಿಗೆ ಇದು ತಿಳಿಯಿತು. ಕೋಪಾವಿಷ್ಟನಾಗಿ ಯಜ್ಞ ಶಾಲೆಗೆ ಬಂದನು. ತನ್ನ ಸತಿಯ ಸ್ಥಿತಿಯನ್ನು ನೋಡಿ ಬಹು ಉಗ್ರಕೋಪದಿಂದ ದೇವಿಯನ್ನು ತನ್ನ ಹೆಗಲಿನಲ್ಲಿ ಇರಿಸಿಕೊಂಡು ನೃತ್ಯಮಾಡ ತೊಡಗಿದನು. ಪ್ರಪಂಚವೆಲ್ಲವೂ ನಡುಗತೊಡಗಿತು. ದೇವತೆಗಳು ಹೆದರಿದರು, ಕೊನೆಗೆ ವಿಷ್ಣುವು ಉಪಾಯಾಂತರದಿಂದ ದೇವಿಯ ಶರೀರದ ಒಂದೊಂದು ಭಾಗವು ಬೀಳತೊಡಗಿತು. ದೇವೀಭಾಗವತ, ಕಾಳಿಕಾ ಪುರಾಣಗಳಲ್ಲಿ ಇದರ ವರ್ಣನೆಯನ್ನು ವಿವರವಾಗಿ ನೀಡಲಾಗಿದೆ. ಹಾಗೆ ಬಿದ್ದ ಒಂದೊಂದು ಸ್ಥಳವೂ ಒಂದು ಪವಿತ್ರ ಪೀಠವಾಯಿತು.

ತಂತ್ರಗ್ರಂಥಗಳಲ್ಲಿ ಈ ಪೀಠಗಳ ಸಂಖ್ಯೆಯನ್ನು ವಿವಿಧ ರೀತಿಯಲ್ಲಿ ಗುರುತಿಸಿದ್ದಾರೆ. ಕಾಳಿಕಾ ಪುರಾಣ, ರುದ್ರಯಾಮಾಲಾ, ಕುಬ್ಜಿಕಾ ತಂತ್ರ, ತಂತ್ರಸಾರ, ತಂತ್ರಚೂಡಾಮಣಿ ಮೊದಲಾದ ಕೆಲವು ಗ್ರಂಥಗಳಲ್ಲಿ ಐವತ್ತೊಂದು ಎಂದು ಗುರುತಿಸಿರುತ್ತಾರೆ. ಮತ್ತೆ ಕೆಲವರು ಇಂತಹ ಪೀಠಗಳ ಸಂಖ್ಯೆ ನೂರ ಎಂಟು ಎಂದೂ ಗುರುತಿಸುತ್ತಾರೆ. ಮಹಾಭಾರತದಲ್ಲಿ 108 ಕ್ಷೇತ್ರಗಳನ್ನು ನಮೂದಿಸಲಾಗಿದೆ. ಮತ್ಸ್ಯಪುರಾಣದಲ್ಲಿಯೂ ಇದನ್ನೇ ಕಾಣುತ್ತೇವೆ.

ಪೀಠಗಳ ಸಂಖ್ಯೆ ಹೇಗಾದರೂ ಇರಲಿ. ಇವು ಭರತಖಂಡದ ಭಾವೈಕ್ಯಕ್ಕೆ ಬಹಳ ಸಹ ಕಾರಿಯಾಗಿವೆ. ದೇಶದ ಯಾವ ಮೂಲೆಯಲ್ಲಿ ಹೋದರೂ ಒಂದಲ್ಲ ಒಂದು ಹೆಸರಿನಿಂದ ದೇವಿಯ ದರ್ಶನವಾಗುತ್ತದೆ. ಎಲ್ಲಾ ದೇವಿಯರ ಮಾಹಾತ್ಮ್ಯೆಯೂ ಒಂದೇ ಆಗಿದೆ. ಎತ್ತ ಎತ್ತಹರಿದರೂ ಎಲ್ಲಾ ನದಿಗಳೂ ಕೊನೆಯಲ್ಲಿ ಒಂದೇ ಸಾಗರದಲ್ಲಿ ತಮ್ಮ ಇರುವಿಕೆಯನ್ನು ಮರೆಯುವಂತೆ ಎತ್ತ ಎತ್ತ ಹೋದರೂ ಈ ದೇವಿಯ ಕ್ಷೇತ್ರಗಳಲ್ಲಿ ಭಕ್ತರು ಒಂದೇ ಒಂದು ತತ್ತ್ವವನ್ನು ಕಾಣುತ್ತಾರೆ. ಯಾವ ಹೆಸರಿನಿಂದ ಕರೆದರೂ ದೇವೀ ಒಬ್ಬಳೇ ನಾಮ ಹಲವು, ರೂಪ ಹಲವು ಆದರೆ ಶಕ್ತಿ ಒಂದೇ. ಅದೇ ಸರ್ವಶಕ್ತಿ. ಅದೇ ಮಹಾಶಕ್ತಿ, ಆ ಶಕ್ತಿಯ ರೂಪವೇ ಬೇರೆ ಬೇರೆ ರೀತಿಯಲ್ಲಿ ಗೋಚರಿಸುತ್ತವೆ ಎಂದು ಅನುಭವ ಪೂರ್ವಕವಾಗಿ ಅರಿಯುತ್ತಾರೆ.

ದೇವಿಯಿಂದ ಕೆಳಗೆ ಬಿದ್ದ ಲಿಂಗದ ಹೆಸರಿಗನುಗುಣವಾಗಿ ದೇವಿಯ ಕ್ಷೇತ್ರಗಳು ಮಹಿಮಾನ್ವಿತವಾದವು. ಸುಲಭವಾಗಿ ಅಧ್ಯಯನ ಮಾಡಲು (ಅ) ದೇವಿಯ

* Tatvaloka. Nov 1994 p - 6

ಶರೀರದಿಂದ ಬಿದ್ದ ಭಾಗ ಅಥವ ಲಿಂಗ (ಆ) ದೇವಿಯ ಶಕ್ತಿಯ ರೂಪ (ಇ) ಭೈರವನು ಅಲ್ಲಿ ಯಾವ ಹೆಸರಿನಿಂದ ನೆಲೆ ಗೊಂಡಿದ್ದಾನೆ. (ಈ) ಪೀಠದ ಸ್ಥಳ ಎಂಬುದನ್ನು ಗಮನಿಸಬೇಕು.

ಐವತ್ತೊಂದು ಪೀಠಗಳ ವಿವರಣೆಯನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ.

**1. ಹಿಂದುಲಾಜ್:** (ಅ) ದೇವಿಯ ಕಪಾಲದಿಂದ ಕೆಳಗೆ ಬಿದ್ದಿತು (ಆ) ಶಕ್ತಿಯ ಹೆಸರು ಕೋತಾರಿ (ಇ) ಭೈರವನ ಹೆಸರು ಭೀಮಲೋಚನ (ಈ) ದೇವಿಯ ಭಾಗವು ಕೆಳಗೆ ಬಿದ್ದಭಾಗ ಅಥವ ಪ್ರದೇಶ ಬೆಲೂಚಿಸ್ಥಾನ ಈಗಿನ ಪಾಕೀಸ್ಥಾನ.

**2. ಕಿರೀಟ:** (ಅ) ಕಿರೀಟವು ಇಲ್ಲಿ ಬಿದ್ದಿತು (ಆ) ವಿಮಲ ಅಥವ ಭುವನೇಶಿ, (ಇ) ಸಮಾವರ್ತ (ಈ) ಬಟ್ನಾಗರ್ (ಪಶ್ಚಿಮ ಬಂಗಾಳದ ಗಂಗಾನದಿಯ ತೀರ.)

**3. ಬೃಂದಾವನ:** (ಅ) ಕೂದಲು (ಆ) ಉಮಾ (ಇ) ಬುತೇಷ (ಈ) ಭೂತೇಶ್ವರ ಮಹಾದೇವ ದೇವಾಲಯ ಮಥುರ - (ಬೃಂದಾವನ ಮಾರ್ಗದಲ್ಲಿದೆ.)

**4. ಕರವೀರ :** (ಅ) ಮೂರು ಕಣ್ಣುಗಳು (ಆ) ಮಹಿಷ,ಮರ್ದಿನಿ, (ಇ) ಕ್ರೋದಿಶ (ಈ) ಮಹಾಲಕ್ಷ್ಮಿ ದೇವ್ಹಾಲಯ ಕೊಲ್ಹಾಪುರ. (ಮಹಾರಾಷ್ಟ್ರ)

**5. ಸುಗಂಧಾ :** (ಅ) ಮೂಗು (ಆ) ಸುಗಂಧಾ ಅಥವ ಉಗ್ರಾತ್ರಾ (ಇ) ತ್ರಯಂಬಕ (ಈ) ಶಿಕಾರಪುರ (ಬಂಗ್ಲಾದೇಶದಲ್ಲಿರುವ ಬರೀಸಾಲ್ ನಗರದ ಸಮೀಪದಲ್ಲಿದೆ).

**6. ಕಾರ - ಟೋಯ - ಟಾಟಾ:** (ಅ) ಎಡದ ಕಿವಿ (ಆ) ಅಪರ್ಣಾ (ಇ) ವಾಮನ (ಈ) ಭವಾನಿಪುರ (ಬಂಗ್ಲಾದೇಶದ ಬೋಗಟಾನಗರದ ಸಮೀಪದಲ್ಲಿದೆ.

7. **ಶ್ರೀ ಪರ್ವತ** : (ಅ) ಬಲದ ಕಿವಿ (ಆ) ಶ್ರೀಸುಂದರೀ (ಇ) ಸುಂದರಾನಂದ (ಈ) ಲಡಾಕ್ ಪ್ರದೇಶ (ಕಾಶ್ಮೀರ).

**8. ವಾರಣಾಸೀ :**(ಅ) ಕಿವಿಯ ಆಭರಣಗಳು (ಆ) ವಿಶಾಲಾಕ್ಷೀ (ಇ) ಕಾಲ- ಭೈರವ (ಈ) ಮಣಿಕರ್ಣಿಕಾ ಘಟಕ. (ಉತ್ತರ ಪ್ರದೇಶ)

**9. ಗೋದಾವರೀ:** (ಅ) ಎಡದ ಕೆನ್ನೆ (ಆ) ವಿಶ್ವೇಷಿ ಅಥವಾ ರಾಕಿಣೀ (ಇ) ವಿಶ್ವೇಷ ಅಥವ ದಂಡಪಾಣಿ (ಈ) ಗೋದಾವರಿಯ ತಟದಲ್ಲಿರುವ ಕೋಟಿತೀರ್ಥ (ಆಂಧ್ರ ಪ್ರದೇಶದ ರಾಜಮಹೇಂದ್ರವರಂ ಹತ್ತಿರ. )

**10. ಗಂಡಕೀ :** (ಅ) ಬಲದ ಕೆನ್ನೆ (ಆ) ಗಂಡಕೀ (ಇ) ಚಕ್ರಪಾಣಿ (ಈ) ಗಂಡಕೀನದಿಯ ತಟ (ನೇಪಾಳದ ಗಂಡಕೀ ನದಿಯ ತೀರ ಮುಕ್ತನಾಥ ).

11. **ಶುಚಿ :** (ಅ) ಮೇಲಿನ ಹಲ್ಲುಗಳು ದವಡೆ ( ಆ ) ನಾರಾಯಣೀ (ಇ) ಸಂಹಾರ (ಈ) ಕನ್ಯಾಕುಮಾರೀ ಹತ್ತಿರವಿರುವ ಸ್ಥಾನ ಶಿವದೇವಸ್ಥಾನ ಶುಚೀಂದ್ರಂ (ತಮಿಳುನಾಡು).

**12.** ಪಂಚಸಾಗರ :(ಅ) ಕೆಳಗಿನ ಹಲ್ಲುಗಳ ದವಡೆ (ಆ) ವಾರಾಹಿ (ಇ) ಮಹಾರುದ್ರ (ಈ) ಗುರುತಿಸಲಾಗಿಲ್ಲ.

**13.** ಜ್ವಾಲಾಮುಖಿ : (ಅ) ನಾಲಿಗೆ (ಆ) ಅಂಬಿಕಾ ಅಥವ ಸಿದ್ಧಿದಾ (ಇ) ಉನ್ಮತ್ತ (ಈ) ಹಿಮಾಚಲ ಪ್ರದೇಶ.

**14.** ಭೈರವ ಪರ್ವತ :(ಅ) ಮೇಲಿನ ತುಟಿ (ಆ) ಅವಂತಿ (ಇ) ಲಂಬಾ ಕರಣ (ಈ) ಉಜ್ಜಯಿನಿ - ಸಿಪ್ರಾನದಿಯ ತಟದಲ್ಲಿರುವ ನಗರ.

**15.** ಅಟ್ಟಹಾಸ : (ಅ) ಕೆಳಗಿನ ದವಡೆ (ಆ) ಫುಲ್ಲಾರ (ಇ) ವಿಶ್ವೇಶ (ಅ) ಲುದ್ದಾಪುರದಹತ್ತಿರ (ಅಹಮದ್‌ಪುರ ಮತ್ತು ಕಟವಾ ರೈಲು ಮಾರ್ಗದ ಮಧ್ಯದಲ್ಲಿದೆ.)

**16.** ಜ್ಞಾನಸ್ಥಾನ :(ಅ) ಕೆನ್ನೆ (ಆ) ಭ್ರಾಮರಿ (ಇ) ವಿಕ್ರಿರಿತಾಕ್ಷ (ಈ) ಭದ್ರಕಾಳ ಕ್ಷೇತ್ರ ನಾಸಿಕ್ (ಪಂಚವಟಿಯ ಹತ್ತಿರ).

**17.** ಕಾಶ್ಮೀರ : (ಅ) ಕತ್ತು (ಆ) ಮಹಾಮಾಯಾ (ಇ) ತ್ರಿ - ಸಂಧ್ಯೇಶ್ವರ (ಈ) ಅಮರನಾಥ ಗುಹೆ.

**18.** ನಂದೀಪುರ :(ಅ) ಕೊರಳಿನ ಕಂಠಾಭರಣ (ಆ) ನಂದಿನಿ (ಇ) ನಂದಿಕೇಶ್ವರ (ಈ) ವಟವೃಕ್ಷದ ಸಮೀಪದಲ್ಲಿದೆ ಸಯಿನ್‌ದಿಯಾ (ಹೌರಾ ಮತ್ತು ಕ್ಯೂಲ್ ರೈಲು ಮಾರ್ಗದ ಮಧ್ಯದಲ್ಲಿರುವ ಸ್ಥಳ ಪಶ್ಚಿಮ ಬಂಗಾಳ).

**19.** ಶ್ರೀಶೈಲ : (ಅ) ಕೊರಳಿನ ಮೂಳೆ (ಆ) ಮಹಾಲಕ್ಷ್ಮೀ, . (ಇ) ಸಂವರಾನಂದಾ (ಈ) ಭ್ರಮರಾಂಬಿಕಾ ದೇವಸ್ಥಾನ ಶ್ರೀಶೈಲ (ಆಂಧ್ರ ಪ್ರದೇಶ ).

**20.** ನಲಹತಿ : (ಅ):ವಿವರ ತಿಳಿದು ಬಂದಿಲ್ಲ. (ಆ) ಕಾಳಿಕಾ (ಇ) ಯೋಗೀಶ, (ಈ)ನಲಹತಿ (ಪಶ್ಚಿಮ ಬಂಗಾಳ ).

**21.** ಮಿಥಿಲಾ : (ಅ) ಎಡಭುಜ (ಆ) ಮಹಾದೇವೀ ಅಥವ ಉಮಾ (ಇ) ಮಹೋದರಾ (ಈ): ದುರ್ಗಾದೇವಾಲಯ (ಜನಕಪುರದ ಹತ್ತಿರ ).

**22.** ರತ್ನಾವಳೀ : (ಅ) ಬಲಭುಜ (ಆ) ಕುಮಾರೀ (ಇ) ಶಿವಾ (ಈ) ತಿಳಿದು ಬಂದಿಲ್ಲ.

**23.** ಪ್ರಭಾಸ : (ಅ) ಉದರದ ತಳಭಾಗ (ಆ) ಚಂದ್ರಭಾಗಾ (ಇ) ವೆಕ್ರತುಂಡಾ (ಈ) ಅಂಬಾಜೀ ದೇವಸ್ಥಾನ (ಗಿರಿನಾರ್ ಬೆಟ್ಟಗಳಲ್ಲಿದೆ.)

**24.** ಜಲಂಧರ : (ಅ) (ಎಡಭಾಗದ ಸ್ಥಾನ (ಆ) ತ್ರಿಪುರಮಾಲಿನೀ. (ಇ) ಭೀಷಣಾ (ಈ) ಪಂಜಾಬ್.

B4

A3

25. ರಾಮಗಿರಿ :(ಅ) ಬಲಭಾಗದ ಸ್ತನ (ಆ) ಶಿವಾಣಿ (ಇ) ಚಂದ (ಈ) ಶಾರದಾ ದೇವಾಲಯ ಚಿತ್ರ ಕೂಟ.

26. ವೈದ್ಯನಾಥ : (ಅ) ಹೃದಯ (ಆ) ಜಯದುರ್ಗಾ (ಇ) ವೈದ್ಯನಾಥ (ಈ) ಶಕ್ತಿ ದೇವಾಲಯ - ವೈದ್ಯನಾಥ ದೇವಾಲಯದ ಎದುರು. (ಬಿಹಾರ ರಾಜ್ಯ.)

27. ವಕ್ರೇಶ್ವರ : (ಅ) ಮೆದುಳು (ಆ) ಮಹಿಷಮರ್ದಿನೀ (ಇ) ವಕ್ರಾಂತಾ (ಈ) ದುಬ್ರಾಜಪುರದ ಸ್ಮಶಾನ. ಓಂಡಾಲಾ - ಸೈಂದ್ಯ ರೈಲ್ವೆಮಾರ್ಗದಲ್ಲಿ (ಪಶ್ಚಿಮ ಬಂಗಾಳ.)

28. ಕನ್ಯಕಾಶ್ರಮ: (ಅ) ಹಿಂಭಾಗದ ಬೆನ್ನು ಹುರಿ (ಆ) ಶರ್ವಾಣೀ (ಇ) ನಿಮಿಷಾ (ಈ) ಭದ್ರಕಾಳೀ ದೇವಸ್ಥಾನ ಕನ್ಯಾಕುಮಾರಿ ದೇವಸ್ಥಾನದ ಒಳ ಆವರಣದಲ್ಲಿ ಕನ್ಯಾಕುಮಾರಿ (ತಮಿಳುನಾಡು)

29. ಬಹುಳ : (ಅ) ಎಡ ತೋಳು (ಆ) ಬಹುಳಾ ಅಥವ ಚಂಡಿಕಾ (ಇ) ಬೈರುಕ (ಈ) ಕೇತು ಬ್ರಹ್ಮ ದೇವಾಲಯ, ಕಟ್ವಾನಗರದ ಹತ್ತಿರ (ಪಶ್ಚಿಮ ಬಂಗಾಳ.)

30. ಚಟ್ಟಾಲ : (ಅ) ಬಲತೋಳು (ಆ) (ಇ) ಭವಾನಿ ಚಂದ್ರಶೇಖರ (ಈ) ಭವಾನಿ ದೇವಸ್ಥಾನ ಚಂದ್ರಶೇಖರ ಬೆಟ್ಟ ಸೀತಾಕುಂಡದ ಹತ್ತಿರ (ಬಂಗ್ಲಾದೇಶದ ಭೋಟಾಗಾಂವ್ ಹತ್ತಿರ.)

31. ಉಜ್ಜಯಿನಿ : (ಅ) ಕತ್ತಿನ ಪಟ್ಟಿಯ ಮೂಳೆ. (ಆ) ಮಂಗಳ ಚಂಡಿ. (ಇ) ಕಪಿಲಾಂಬರ (ಈ) ಹರಸಿದ್ಧಿ ದೇವಸ್ಥಾನ ಉಜ್ಜಯಿನಿಯ ಬಳಿಯಲ್ಲಿರುವ ರುದ್ರ ಸಾಗರದ ಬಳಿ.

32. ಮಣಿವೇದಿಕಾ : (ಅ) ತೋಳು (ಆ) ಗಾಯತ್ರಿ (ಇ) ಸರ್ವಾನಂದಾ (ಈ) ಗಾಯತ್ರಿ ಬೆಟ್ಟಗಳು ಪುಷ್ಕರದ ಬಳಿ.

33. ಮಾನಸ : (ಅ) ಬಲತೋಳು (ಆ) ದಾಕ್ಷಾಯಿಣೀ (ಇ) ಹರಾ ಅಥವಾ ಅಮರಾ (ಈ) ಮಾನಸಸರೋವರ ಟಿಬೆಟ್ ಪೀಠ ಭೂಮಿ.

34. ಯಶೋರ : (ಅ) ಎಡತೋಳು (ಆ) ಯಶೋರೇಶ್ವರೀ (ಇ) ಚಂದಾದ (ಈ)ಈಶ್ವರ ಪುರಿ (ಜೈಶೋರ್ - ಯಶೋಹರ ಮಾರ್ಗ, ಬಂಗ್ಲಾದೇಶ ).

35. ಪ್ರಯಾಗ : (ಅ) ಕೈ ಬೆರಳುಗಳು (ಆ) ಲಲಿತಾ (ಇ) ಭವ (ಈ) ಲಲಿತಾ ದೇವಿ ದೇವಸ್ಥಾನ ಅಕ್ಷಯವಟವೃಕ್ಷದ ಬಳಿ ಅಲಹಾಬಾದ್.

36. ವಿರಾಜ : (ಅ) ಹೊಕ್ಕಳು (ಆ) ವಿಮಲಾ (ಇ) ಜಗನ್ನಾಥ (ಈ) ವಿಮಲಾದೇವಿ ದೇವಾಲಯ - ಜಗನ್ನಾಥ ದೇವಾಲಯ ಪುರಿ (ಉತ್ಕಲ ದೇಶ.)



**37. ಕಾಂಚೀ :** (ಅ) ಮೂಳೆಗಳು (ಆ) ಸೇವಗರ್ಭ (ಇ) ರುರು (ಈ) ಕಾಳಿಕಾದೇವಸ್ಥಾನ ಶಿವಕಂಚಿ ಕಾಂಚೀಪುರ (ತಮಿಳು ನಾಡು.)

**38. ಕಾಲಮಹಾದೇವ :** (ಅ) ಎಡಪೃಷ (ಆ) ಕಾಳೀ (ಇ) ಅಸಿತಾಂಗ (ಈ) ಸ್ಥಳ ನಿರ್ಧಾರವಾಗಿಲ್ಲ.

**39. ಸೋನಾ :**(ಅ) (ಬಲಭಾಗದ ಪೃಷ್ಠ (ಆ) ನರ್ಮದಾ ಅಥವಾ ಸೋನಾಕ್ಷಿ (ಇ) ಭದ್ರಸೇನಾ (ಈ) ಸೋನಾನದಿಯ ಉಗಮಸ್ಥಳ (ಅಮರ ಕಂಟಕ ಪ್ರದೇಶ).

**40. ಕಾಮಗಿರಿ :** (ಅ) ಯೋನಿ (ಆ) ಕಾಮಾಖ್ಯಾ (ಇ) ಉಮಾನಂದಾ (ಈ) ಕಾಮಾಖ್ಯದೇವಸ್ಥಾನ, ಗೌಹತಿ, (ಅಸ್ಸಾಂ.)

**41. ನೇಪಾಳ :** (ಅ) ಎರಡೂ ಕಾಲಿನ ಕಿಣ್ಣುಗಳು (ಆ) ಮಹಾಮಾಯಾ (ಇ) ಕಪಾಲೀ (ಈ) ಗುಹೇಶ್ವರೀ ದೇವಸ್ಥಾನ ಭಾಗಮತಿ ನದಿಯ ತೀರ ಪಶುಪತಿನಾಥ (ನೇಪಾಳ)

**42. ಜಯಂತಿ :** (ಅ) ಎಡತೊಡೆ (ಆ) ಜಯಂತೀ (ಇ) ಕ್ರಮಭದೀಶ್ವರ (ಈ) ದರ್ಭಂಗ ಪಟ್ಟಣ ಜಯಂತಿ ಬೆಟ್ಟಗಳು. ಶಿಲ್ಲಾಂಗ್ ಬಳಿ, (ಮೇಘಾಲಯ.)

**43. ಮಗಧ :** (ಅ) ಬಲತೊಡೆ (ಆ) ಸರ್ವಾನಂದಕಾರಿ (ಇ) ವ್ಯೋಮಕೇಶ (ಈ) ಪಟ್ಟಣೇಶ್ವರೀ ದೇವಿ ದೇವಾಲಯ, ಪಾಟ್ನಾನಗರದ ಬಳಿ, (ಬಿಹಾರ.)

**44. ತ್ರಿಸ್ರೋತಾ :** (ಅ) ಎಡಪಾದ (ಆ) ಭ್ರಾಮರೀ (ಇ) ಈಶ್ವರ (ಈ) ಜಲಪಾಯಿದೇವಸ್ಥಾನ, (ಪಶ್ಚಿಮ ಬಂಗಾಳ.)

**45. ತ್ರಿಪುರ :** (ಅ) ಬಲಪಾದ (ಆ) ತ್ರಿಪುರಸುಂದರೀ (ಇ) ತ್ರಿಪುರೇಷ ರಾಧಕಿಶೋರದ ಬಳಿಯಿರುವ :' (ಬೆಟ್ಟಗಳು ತ್ರಿಪುರ.)

**46. ವಿಭಾಷಾ :** (ಅ) ಎಡ ಮಣಿಕಟ್ಟು (ಆ) ಕಾಪಾಲಿನೀ ಅಥವ ಭೀಮರೂಪಾ (ಇ) ಸರ್ವಾನಂದಾ (ಈ) ಕಾಳಿದೇವಸ್ಥಾನದ ಮೂಲಕ ನಗರದ ಬಳಿ ಮಿಡ್‌ನಾಪುರ ಜಿಲ್ಲೆ, (ಪಶ್ಚಿಮ ಬಂಗಾಳ.)

**47. ಕುರುಕ್ಷೇತ್ರ :** (ಅ) ಬಲಮಣಿಕಟ್ಟು, (ಆ) ಸಾವಿತ್ರೀ (ಇ) ಸ್ಥಾಣು (ಈ) ದ್ವೈಪಾಯನ ಸರೋವರ.

**48. ಲಂಕಾ :**(ಅ) ಮಣಿಕಟ್ಟು (ಆ) ಇಂದ್ರಾಕ್ಷೀ (ಇ) ರಾಕ್ಷಸೇಶ್ವರ (ಈ) ಶ್ರೀಲಂಕಾ.

**49. ಯುಗಾದ್ಯ :** (ಅ) ಬಲಭಾಗದ ಹೆಬ್ಬೆರಳು (ಆ ) ಭೂತಧಾತ್ರೀ (ಇ) ಕ್ಷೀರ ಕಂಟದ ಅಥವ ಯುಗಾಧ್ಯ (ಈ) ಉತ್ತರ ಖೀರ ಪಟ್ಟಣ ಬರದ್ವಾನ್ ಬಳಿ, (ಪಶ್ಚಿಮ ಬಂಗಾಳ.)

**50.** ವಿರಾಟ: (ಅ) ಎಡಗಾಲಿನ ಹೆಬ್ಬೆಟ್ಟು (ಆ) ಅಂಬಿಕಾ (ಇ) ಅಮೃತಾ (ಈ) ವೈರಾಟ ನಗರದ ಬಳಿ ಜಯಪುರ (ರಾಜಸ್ಥಾನ.)

**51.** ಕಾಳಿಪೀಠ: (ಅ) ಉಳಿದಿರುವ ಬೆರಳುಗಳು (ಆ) ಕಾಶಿಕಾ (ಇ) ನಕುಳಿಕಾ (ಈ) ಕಾಳಿದೇವಸ್ಥಾನ ಕಾಳೀಘಟ್ಟ, ಕಲ್ಕತ್ತ.*

* Y.S.P. Thorat - Shakti Peethas - An overview Tatvaloka, Nov. 1994. Chennai, pp. 7-11. As codified by Sri S.K. Ramachandra Rao in Pratima Kosha Encyclopaedia of Indian Iconography, Vol. VI. Editor Daivajna K.N. Somayaji.





ಅಧ್ಯಾಯ ೧೦

## ಸಪ್ತಮಾತೃಕಾ ಏಕತತ್ತ್ವಾರ್ಥನಿರೂಪಣೆ

ಮಾತೃ ಪ್ರಥಮ ದೇವತೆ. "ಮಾತೃದೇವೋ ಭವ " ಎಂದು ತಾಯಿಯನ್ನು ಗೌರವಿಸುತ್ತೇವೆ. ಕಾರಣವಿಷ್ಟೆ. ತಾಯಿ ಕರುಣಾಮಯಿ, ಮಮತಾ ಮಯಿ, ನಮಗೆ ಸಂತೋಷವಾದಾಗ ಪ್ರೋತ್ಸಾಹಿಸುವವಳು ತಾಯಿ. ನಮಗೆ ತೊಂದರೆಯಾದಾಗ ನಮ್ಮ ನೋವನ್ನು ಹೋಗಲಾಡಿಸುವವಳು ತಾಯಿ. ಆದುದರಿಂದಲೇ ತಾಯಿಗೆ ಅಗ್ರಪೂಜೆ.

ಅದ್ವೈತತತ್ತ್ವದಲ್ಲಿ ಪುರುಷ ಮತ್ತು ಸ್ತ್ರೀಭಾವದಲ್ಲಿ ಭೇದವಿಲ್ಲ. ಸರ್ವವೂ ಪರಬ್ರಹ್ಮದ ತುಣುಕುಗಳೇ ಆಗಿದೆ. ಬ್ರಹ್ಮವು ಒಂದೇ, ಅದೇ ವಿವಿಧ ರೂಪದಲ್ಲಿ ಪ್ರಕಾಶಗೊಳ್ಳುತ್ತದೆ. 'ಸರ್ವಂ ಖಲ್ವಿದಂ ಬ್ರಹ್ಮ' ಸರ್ವವೂ ಬ್ರಹ್ಮಮಯವಾಗಿದೆ. 'ಬ್ರಹ್ಮಸತ್ಯಂ' ಬ್ರಹ್ಮವೇ ಸತ್ಯವಾದುದೆಂದು ಆಚಾರ್ಯ ಶಂಕರರು ಸ್ಥಿರೀಕರಿಸಿರುತ್ತಾರೆ.

ಆಚಾರ್ಯರು ಅಂದು ಪ್ರಚಲಿತವಿದ್ದ ನೂರಾರು ಪದ್ದತಿಗಳನ್ನು ಸಮನ್ವಯಗೊಳಿಸಿ ಪಂಚಾಯತನ ಪೂಜೆಯನ್ನು ರೂಪಿಸಿದರು. ಪಂಚಾಯತನ ಪೂಜೆಯೆಂದರೆ ಐದು ದೇವತೆಗಳನ್ನು ಮಾತ್ರ ಪೂಜಿಸುವುದು ಎಂದಲ್ಲ **'ಸರ್ವದೇವ 'ನಮಸ್ಕಾರಃ ಕೇಶವಂ ಪ್ರತಿಗಚ್ಛತಿ'** ಎಂಬ ಸೂಕ್ತಿಯನ್ನು ವ್ಯವಹಾರಕ್ಕೆ ಅಳವಡಿಸಿದ್ದಾರೆ. ಈ ಐದು ದೇವರುಗಳು ಎಂದರೆ ಸಂಖ್ಯೆಯಲ್ಲಿ ಐದೂ ಎಂದೂ ಅರ್ಥವಲ್ಲ. ಪ್ರಚಲಿತವಿದ್ದ ದೇವತೆಗಳನ್ನು ಗಣನೆಗೆ ತೆಗೆದುಕೊಂಡು ಅವುಗಳಲ್ಲಿ ಅನುಕೂಲವಾದ ದೇವತೆಗಳ ಹೆಸುರುಗಳನ್ನು ಸಮನ್ವಯ ಗೊಳಿಸಿದರು. ಈ ಐದೂ ದೇವತೆಗಳ ಪೂಜೆ ಎಂದರೆ ಸಾಧಾರಣವಾಗಿ ಎಲ್ಲಾ ದೇವರುಗಳೂ ಅದರಲ್ಲಿಯೇ ಅಡಗಿದೆ. ಆದುದರಿಂದ ಪಂಚಾಯತನ ಪೂಜೆಯಿಂದ ಎಲ್ಲಾ ದೇವತೆಗಳೂ ಒಂದೇ ಎಂಬ ಭಾವನೆ ಬೆಳೆದು ಸಮತ್ವದ ಭಾವನೆ ನೆಲೆಯಾಗುತ್ತದೆ. ಯಾವ ದೇವರನ್ನು ಪೂಜಿಸಿದರೂ ಆದು ಒಂದೇ ದೇವರ ಬೇರೆ ಬೇರೆ ಹೆಸರುಗಳು ಮತ್ತು ಬೇರೆ ಬೇರೆ ರೂಪಗಳೆಂಬ ಭಾವನೆ ಸ್ಥಿರವಾಗುತ್ತದೆ. ಆದುದರಿಂದಲೇ ಪಂಚಾಯತನ ಪೂಜೆ ಅನುಷ್ಠಾನ ಶ್ರೇಷ್ಟವಾದುದು.

ಅದ್ವೈತಒಂದು ಅನುಭವ. ಸರ್ವಸ್ವದಲ್ಲೂ ಏಕತ್ವವನ್ನು ಕಾಣುವ ಆದಿತತ್ತ್ವ. ಒಂದೇ ಚಿನ್ನದಿಂದ ಮಾಡಿದ ಹಲವಾರು ಆಭರಣಗಳಲ್ಲಿ ಅದ್ವೈತಿಯಾದವನು ವಸ್ತು ವಿಶೇಷತೆಯನ್ನು ಕಾಣದೇ ಒಂದೇ ಚಿನ್ನದಿಂದ ಮಾಡಿದ ವಸ್ತುಗಳು ಅವುಗಳೆಂದು ಅರಿತು ಚಿನ್ನದ ಅನುಭವ ಪ್ರಧಾನವೇ ಹೊರತು ವಸ್ತು ಪ್ರಧಾನವಾಗಿರುವುದಿಲ್ಲ ಎಂಬ ತತ್ತ್ವವನ್ನು ಮನಗಾಣುತ್ತಾನೆ. ಹಲವಾರು ಆಕಾರದ ಪಾತ್ರೆಗಳು ಇದ್ದರೂ

ಅವೆಲ್ಲವೂ ಮೂಲ ವಸ್ತುವಾದ ಮಣ್ಣಿನಿಂದಲೇ ಮಾಡಿದವುಗಳು. ಒಂದೇ ಮಣ್ಣು ಹಲವಾರು ರೂಪದಲ್ಲಿ ಪ್ರದರ್ಶಿತಗೊಂಡಿವೆ. ಮಣ್ಣಿನ ಮೂಲ ರೂಪದಲ್ಲಿ ಬದಲಾವಣೆ ಕಾಣುವುದಿಲ್ಲ. ಅದರ ಅನುಭವ ದಿನನಿತ್ಯದಲ್ಲಿ ಅನುಭವ ಗ್ರಾಹ್ಯವಾಗಲೆಂದೇ ಆಚಾರ್ಯರು ಪಂಚಾಯತನ ಪೂಜೆಯನ್ನು ಅನುಗ್ರಹಿಸಿರುತ್ತಾರೆ.

ವೇದಗಳು 'ಏಕಮೇವಾದ್ವಿತೀಯಂ ಬ್ರಹ್ಮ' ಎಂದು ಸಾರುತ್ತವೆ. ಬ್ರಹ್ಮವು ಒಂದೇ ನಾಮ ಹಲವು ರೂಪದಲ್ಲಿ ಗೋಚರವೆನ್ನುತ್ತವೆ. ಎರಡಿಲ್ಲದುದು ಎನ್ನುತ್ತಾರೆ. ಅದನ್ನೇ ಶ್ರೀ ಮದಾಚಾರ್ಯರು ಅದ್ವೈತ ಎರಡಲ್ಲದುದು ಅಂದರೆ ಅದರ ಅರ್ಥ. ಮೂರು ಅಲ್ಲದುದು, ನಾಲ್ಕು ಅಲ್ಲದುದು ಎಂದು ಮುಂದುವರಿಯುತ್ತದೆ. ಅದುದರಿಂದಲೇ ಅದು ಒಂದೇ ಒಂದು ಅದೇ ಅದ್ವೈತ.

ದೇವರ ಸ್ತುತಿ ಮಾಡುವಾಗ "ಏಕಮೇವ ತು ಭೂತಾತ್ಮಾ ಭೂತೇ ಭೂತೇ ವ್ಯವಸ್ಥಿತ" ಅದು ಒಂದೇ ಒಂದು, ಅದು ಪ್ರತಿಭೂತಗಳಲ್ಲಿಯೂ ವ್ಯಾಪಿಸಿದೆ. ಅದು ಶಕ್ತಿ ವಿಶೇಷ. ಯಾವುದಕ್ಕೂ ಗೋಚರವಾಗದು. ಅದು ಇಂದ್ರಿಯಾತೀತ. ಆದುದರಿಂದ ಅನುಭವಕ್ಕೆ ಹೊರತಾದುದು. ಗ್ರಂಥಗಳ ಅಧ್ಯಯನದಿಂದಾಗಲೀ, ಹಲವು ವರ್ಷಗಳ ತಪಸ್ಸಿನಿಂದಾಗಲೀ, ಕಾಣಲಾಗದುದು. ಅಂದರೆ ಅದು ಏನು ! ಅದು ಎಲ್ಲಕ್ಕಿಂತ ಹೊರತಾದುದು. ಅದನ್ನು ಪಡೆಯಲು **'ಧಿಯೋ ಯೋ ನಃ ಪ್ರಚೋದಯಾತ್'** ಎಂದು ಅರ್ಥಿಯು ಕೈಯಲ್ಲಿ ಅರ್ಘ್ಯವನ್ನು ಹಿಡಿದು ಬೇಡುತ್ತಾನೆ. ಅದರಿಂದ ದೊರೆಯುವ ಅನುಭವವೇ ಅದ್ವೈತ. ಅಂತಹ ಜ್ಞಾನಪ್ರಾಪ್ತಿಗೆ ಸಾಧನವಾಗಿ ಅರ್ಥಿಗೆ ದಾರಿ ತೋರಲು ವಿಗ್ರಹಗಳೂ ಅಗತ್ಯ, ಧ್ಯಾನವೂ ಅಗತ್ಯ, ತಪಸ್ಸೂ ಅಗತ್ಯ. ಅದರ ಅನುಭವವಾದ ಮೇಲೆ ಈ ಪ್ರಪಂಚ ಏನೂ ಅಲ್ಲ, ಏನೂ ಇಲ್ಲ. ಅನಂತರ ಅವನು ಅನುಭವ ಪಡೆಯಬೇಕಾದುದೂ ಏನೂ ಇರುವುದಿಲ್ಲ, ಎಲ್ಲಾ ಬಂಧನಗಳಿಂದ ಮುಕ್ತನಾಗಿ ಜೀವನ್ಮುಕ್ತಿಯನ್ನು ಪಡೆಯುವವನಾಗುತ್ತಾನೆ. ವಯಸ್ಸು ಚಿಕ್ಕದಾಗಿದ್ದರೂ ಅಂತಹ ಅನುಭವವನ್ನು ಪಡೆದುದರಿಂದಲೇ ಆಚಾರ್ಯರು ತಮ್ಮ ಮೂವತ್ತೆರಡನೆಯ ವಯಸ್ಸಿನಲ್ಲಿಯೇ ಈ ಭೌತಿಕಪ್ರಪಂಚವನ್ನು ಕಡೆಗಣಿಸಿ ಮೃತ್ಯುವನ್ನು ಜಯಿಸಿ ಅಮರರಾದರು. ಅದನ್ನೇ ಗಾಯಿತ್ರಿಯು ' ಅದೇ ಸತ್ಯವಾದುದು' ಎನ್ನುತ್ತದೆ. ಅದೇ 'ತತ್‌ಸತ್' ಉಪನಿಷತ್ತುಗಳು ಅದನ್ನು 'ಓಂ' ಎಂದು ಸೂಚಿಸುತ್ತವೆ. ಅಂತಹ ಪ್ರಣವದಿಂದ ಕೂಡಿದ ದಿವ್ಯಶಕ್ತಿರೂಪವೇ ಆದಿಶಕ್ತಿ, ಆ ಆದಿಶಕ್ತಿಯಿಂದ ಹೊರಬಂದ ವಿವಿಧ ರೂಪಗಳೇ ***ಸಪ್ತಮಾತೃಕೆಯರು***. ಅದೊಂದು ಕಾರ್ಯ ವಿಶೇಷ.

ದೇವತೆಗಳಿಂದಲೂ ಪೂರ್ತಿಗೊಳಿಸಲಾಗದ ಒಂದು ಕಾರ್ಯವನ್ನು ಮಾಡಲೋಸುಗ ದೇವತೆಗಳು ತಮ್ಮ ಶಕ್ತಿಯನ್ನು ಒಂದು ಶಕ್ತಿಗೆ ಧಾರೆ ಎರೆದರು. ಆ ಶಕ್ತಿಯ ಒಟ್ಟು ಮೊತ್ತವೇ ದೇವಿ. ಅದರಿಂದ ಒಂದೊಂದು ಕಿರಣವಾಗಿ ಹುಟ್ಟಿ ಬಂದವರು ಸಪ್ತಮಾತೃಕೆಯರು ಎಂದು ಪುರಾಣಗಳು ತಿಳಿಸುತ್ತವೆ.

ವಿಷ್ಣು ಸಹಸ್ರನಾಮದಲ್ಲಿ ನಾವು ಈ ತತ್ತ್ವವನ್ನು ಮನಗಾಣುತ್ತೇವೆ. 'ವಿಶ್ವಃ'

ಎಂದು ಮೊದಲಿನ ನಾಮವು ಆ ದಿವ್ಯ ಶಕ್ತಿಯ ಅನುಭವ ಮಾಡಿಸಿದರೆ 'ಸರ್ವ ಪ್ರಹರಣಾಯುಧಃ' ಎಂದು ಮುಕ್ತಾಯವಾಗುತ್ತದೆ. ಆರಂಭದಲ್ಲೀ ಸೃಷ್ಟಿಯೂ ಅಂತ್ಯದಲ್ಲಿ ಲಯವೂ ಆದ ಆ ಪರಾತ್ಪರ ವಸ್ತುವೇ 'ಪರಬ್ರಹ್ಮ' ಎಂದು ಸ್ಥಿರೀಕರಿಸುತ್ತದೆ. ತನ್ಮೂಲಕ ಸೃಷ್ಟಿ, ಸ್ಥಿತಿ, ಲಯಗಳ ರೂಪವನ್ನು ಅರಿಯುತ್ತೇವೆ. ಈ ಕಾರ್ಯ ವಿಶೇಷವನ್ನು ತ್ರಿಮೂರ್ತಿಗಳೆಂದು ಕರೆಯುತ್ತೇವೆ. ಲಲಿತಾಸಹಸ್ರ ನಾಮದಲ್ಲಿ ಮೊದಲನೆಯ ನಾಮವು "ಶ್ರೀ ಮಾತಾ" ಎಂದು ಪ್ರಾಂಭವಾಗುತ್ತದೆ. ಶೀ ಪದವು ಸೃಷ್ಟಿ, ಸ್ಥಿತಿ, ಲಯ ಕಾರಣವಾದ ಶಕ್ತಿಯ ಹೇತುವನ್ನು ಸೂಚಿಸುತ್ತದೆ. ಆದುದರಿಂದ ಅವಳು "ಶ್ರೀ ಮಾತಾ" ಅವುಗಳಿಗೆ ಮಾತೃಸ್ವರೂಪಳು. ಆ ವಸ್ತು ವಿಶೇಷವನ್ನು ಪದಗಳಿಂದ ವರ್ಣಿಸಲು ಸಾಧ್ಯವಾಗುವುದಿಲ್ಲ. ಇದು ಕೇವಲ ಅನುಭವ ಗ್ರಾಹ್ಯ. ಸರ್ವವೇದಗಳೂ ಈ ತತ್ತ್ವವನ್ನೇ ನಿರೂಪಿಸುತ್ತವೆ. ಸರ್ವವೇದಗಳ ಮೂಲತತ್ತ್ವ ಈ ಒಂದೇ ಒಂದು ನಾಮದಲ್ಲಿ ಅಡಗಿದೆ. ಅಂತೆಯೇ ಕೊನೆಯನಾಮ " ಶ್ರೀ ಅಂಬಿಕಾಯೈ ನಮಃ" ಎನ್ನುತ್ತದೆ. ಸರ್ವ ಸಂತೋಷವನ್ನೂ ನೀಡುವವಳು ಸರ್ವದರ ಅರಿವಾದ ಮೇಲೆ ಉಳಿದುದು ಏನಿದೆ. ಸಚ್ಚಿದಾನಂದ ಪರಬ್ರಹ್ಮ ರೂಪದ ಅನುಭವ. ಅದು ದೊರೆತ ಮೇಲೆ ದೊರೆಯಬೇಕಾದುದಾದರೂ ಏನಿರುವುದ್ದು? ಯಾವುದನ್ನು ಪಡೆಯುವುದರಿಂದ ಸರ್ವವೂ ದೊರೆತಂತಾಗುತ್ತದೋ, ಆ 'ತತ್' ಅವಳೇ ಎಂದು ತಿಳಿಸುತ್ತದೆ. ಆದುದರಿಂದ ದೇವಿಯ ಅವತಾರದ ಕಾರಣ ವಿಶೇಷ ಒಂದೇ ಒಂದು. ರೂಪ ಹಲವಾದರೂ, ತತ್ತ್ವ, ನಿಯಮಗಳು ಹಲವಾದರೂ, ಅವಳು ಒಂದೇ ಅಂಶದ ಪ್ರತೀಕ. ಪ್ರತಿರೂಪ. ಆ ಒಂದೊಂದು ಪ್ರತಿ ರೂಪದಿಂದ ಜಗತ್ತಿನ ಕಲ್ಯಾಣ ಮಾಡಿದಳು. ಅರ್ಥಾತ್ ಜಗತ್ತಿನ ಕಲ್ಯಾಣಕ್ಕಾಗಿ ಹಲವಾರು ರೂಪಗಳನ್ನು ಧರಿಸಬಲ್ಲವಳು. ಅರ್ಥಾತ್ ಸರ್ವರೂಪಗಳಲ್ಲಿಯೂ ಸ್ಥಿರವಾದವಳು ಅರ್ಥಾತ್ ಸ್ಸರ್ವ ರೂಪಗಳಲ್ಲಿ ನಿಗೂಢವಾಗಿರುವ ಏಕಶಕ್ತಿ ಅರ್ಥಾತ್ 'ಏಕಮೇವಾ ದ್ವಿತೀಯಂ' ಆ ಎರಡಲ್ಲದ ಒಂದೇ ಒಂದು, ಅದೇ ಅನುಭವ. ಅದೇ ನಿತ್ಯವಾದುದು. ಅದೇ ಸತ್ಯವಾದುದು. ಅದನ್ನು ಅನುಭವ ಪೂರ್ವಕವಾಗಿ ತಿಳಿಸುವುದೇ ***ಸಪ್ತ ಮಾತೃಕಾ*** ರೂಪ ವಿಶೇಷಗಳು.

ಲಲಿತಾ ಸಹಸ್ರನಾಮದಲ್ಲಿ ದೇವಿಯನ್ನು 'ವ್ಯಾಹೃತ್ಯೈ ನಮಃ' (421) ಎಂದು ನಮಸ್ಕರಿಸುತ್ತೇವೆ. ವ್ಯಾಹೃತಿ ಎಂದರೆ ಉಚ್ಚರಿಸುವುದು ಎಂದು ಅರ್ಥ. ಅದನ್ನು ನಾದ ಬ್ರಹ್ಮದ ಶಕ್ತಿಗಳಾದ ಸಪ್ತವ್ಯಾಹೃತಿಗಳಾದ ಭೂಃ, ಭುವಃ, ಸುವಃ, ಮಹಃ, ಜನಃ, ತಪಃ, ಸತ್ಯಂ ಎಂಬುದಾಗಿ ಹೇಳುತ್ತೇವೆ. ಈ ಸಪ್ತವ್ಯಾಹೃತಿಗಳೇ ದೇವಿಯ ಅವತಾರವಾದ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಮತ್ತು ಚಾಮುಂಡಾ ಎಂಬ ಅವತಾರ ವಿಶೇಷಗಳಾಗಿವೆ. ಈ ಸಪ್ತವ್ಯಾಹೃತಿಗಳ ಶಕ್ತಿಗಳೇ ಪಂಚ ಭೂತಗಳ, ಸಪ್ತ ಲೋಕಗಳ, ಸಪ್ತ ಸ್ವರಗಳ, ಮತ್ತು 'ಅ' ಕಾರಾದಿ 50 ಅಕ್ಷರಗಳ ಶಕ್ತಿಗಳಾಗಿವೆ. ಅಂತಹ ಸಪ್ತವ್ಯಾಹೃತಿಗಳ ಸ್ವರೂಪವೂ ಅವಳೇ

ಆಗಿದ್ದಾಳೆ.

ಕಾಳಿಕಾ ಪುರಾಣದಲ್ಲಿ ದೇವಿಯು ಅವತರಿಸಿದಾಗ ರುಂಡ, ಮುಂಡಗಳನ್ನು ಮಾಲೆಯಾಗಿ ಧರಿಸಿ ಹೊರ ಬಂದಳು. ಅವಳ ಆ ರುಂಡ ಮಾಲೆಯಲ್ಲಿ 51 ರುಂಡಗಳಿದ್ದವು. ಅವುಗಳೇ 'ಅ' ಆದಿಯಾಗಿ 51 ಅಕ್ಷರಗಳಾಗಿ ಲೋಕೋದ್ಧಾರಕ್ಕಾಗಿ ಬೆಳಕಾಗಿ ಬಂದವು ಎಂದು ಹೇಳುತ್ತದೆ. ಅಂದರೆ ಅವಳು ಜ್ಞಾನಮಯಿ. 'ಅಕ್ಷರ' ವೆಂದರೆ ನಾಶವಾಗದುದು. ಕ್ಷರ - ಅಳಿವು ಉಳ್ಳದ್ದು, ಅಕ್ಷರವೆಂದರೆ ನಾಶವೂ ಇಲ್ಲದುದು. ಅಂದರೆ ಅವಳು ಸ್ಥಿರವಾದವಳು, ಶಾಶ್ವತವಾದವಳು. ರುಂಡವು ಅಂತಿಮ ನೆಲೆಯನ್ನೂ ಸಾರುತ್ತದೆ. ಸರ್ವವಸ್ತುಗಳೂ ಕೊನೆಯಲ್ಲಿ ಪಡೆಯುವ ಸ್ಥಿತಿ ಅದು. ಅದು ನಿಶ್ಚಿತ, ಅದುವೇ ಸತ್ಯ. ಆದುದರಿಂದ ದೇವಿಯು ಅಂತಹ ನಿತ್ಯಸತ್ಯವನ್ನು ಸಾರುವ ತತ್ತ್ವದ ಪ್ರತೀಕವಾಗಿ ರುಂಡಮಾಲೆಯನ್ನು ಧರಿಸಿರುವವಳಾಗಿದ್ದಾಳೆ.

ಹಲವಾರು ರೂಪಗಳ ಈ ದೇವಿಯು ಕ್ರೂರಳಲ್ಲವೇ ? ಹೌದು ಮಹಾಕ್ರೂರಿ. ಅವಳಂತಹ ಕ್ರೂರಿ ಬೇರಿಲ್ಲ . ದೇವತೆಯಾದವಳು ಕ್ರೂರಿಯಾಗಬಹುದೇ? ಕ್ರೂರ ದೇವತೆಯನ್ನು ಪೂಜಿಸಬಹುದೇ ? ಕ್ರೂರ ಕಾಳಿಯು ಆದರ್ಶ ಪ್ರಾಯಳೇ ? ಹೌದು ದೇವಿಯು ಅವರವರ ಬಯಕೆಗೆ ಅವರವರ ರೂಪದಲ್ಲಿ ಅವರ ಅಭೀಷ್ಟಗಳನ್ನು ನೇರವೇರಿಸುವವಳು. ರಕ್ತಬೀಜನ ರಕ್ತವನ್ನು ಹೀರುವ ಶಕ್ತಿ ಅವಳಿಗಿಲ್ಲವಾಗಿದ್ದರೆ ಅವಳು ಹೇಗೆ ಲೋಕ ರಕ್ಷಣೆ ಮಾಡುತ್ತಿದ್ದಳು. ಅದಷ್ಟಕ್ಕೆ ಮಾತ್ರ ಅವಳು ಕ್ರೂರಿ. ರಕ್ತಬೀಜ ತನ್ನ ಆ ರೂಪಿನಲ್ಲಿ ಮೋಕ್ಷವನ್ನು ಆಪೇಕ್ಷಿಸಿದ. ದೇವಿ ಅವನ ಭಾವನೆಗೆ ತಕ್ಕ ರೂಪಿನಲ್ಲಿ ಅವತರಿಸಿ, ಅವನಿಗೆ ಮೋಕ್ಷವನ್ನು ಅನುಗ್ರಹಿಸಿದಳು. ಆದುದರಿಂದ ಅದನ್ನು ಕ್ರೂರ ಎನ್ನುವುದಾದರೂ ಹೇಗೆ ? ಸರ್ವ ಶಕ್ತಳಾದವಳು ಯಾವಾಗ ಯಾರಿಗೆ ಹೇಗೆ ಬೇಕಾದರೂ ಆಗ ಬಲ್ಲಳು. ಆದುದರಿಂದ ಅವರವರ ಹೃದಯದ ಭಾವನೆ ಪ್ರಧಾನವೇ ಹೊರತು ಉಳಿದ ಹೊರ ನೋಟಗಳಲ್ಲ. 'ಯದ್ಭಾವ್ಯ ತದ್ಭವತಿ' ಎನ್ನುವ ಮಹಾವಾಕ್ಯ "ಮನದಲ್ಲಿದ್ದಂತೆ ಮಾಂಗಲ್ಯ" ವೆನ್ನುತ್ತದೆ ಕನ್ನಡದ ಗಾದೆ. ಭಕ್ತರ ಹೃದಯದಲ್ಲಿ ಶಾಂತಭಾವನೆ ತುಂಬಿಕೊಂಡರೆ ದೇವಿ ಅವರವರ ಬುದ್ಧಿಗೆ ಗ್ರಾಹ್ಯವಾಗುವಂತೆ, ಮನಸ್ಸಿಗೆ ವೇದ್ಯವಾಗುವಂತೆ, ಅನುಭವಕ್ಕೆ ದೊರೆಯುವಂತೆ ಜ್ಞಾನಮಯಿಯಾಗಿ ಗಾಯತ್ರಿಯಾಗಿ, ಸರಸ್ವತಿಯಾಗಿ, ಮಹಾಲಕ್ಷ್ಮಿಯಾಗಿ, ಉಮೆಯಾಗಿ ದರ್ಶನವೀಯುತ್ತಾಳೆ.

**ಗತಿರ್ಭರ್ತಾ ಪ್ರಭುಃ ಸಾಕ್ಷೀ ನಿವಾಸಃ ಶರಣಂ ಸುಹೃತ್ |**
**ಪ್ರಭವಃ ಪ್ರಲಯಃ ಸ್ಥಾನಂ ನಿಧಾನಂ ಬೀಜಮವ್ಯಯಂ || (ಭಗೀ. IX-8)**

ಪರಮಾತ್ಮನು ನಾನೇ ಸರ್ವರ ಅಂತ್ಯ (ಗತಿ) ನಾನೇ ಸರ್ವರ ರಕ್ಷಕನು (ಭರ್ತಾ) ನಾನೇ ಅವುಗಳ ಒಡೆಯ (ಪ್ರಭುಃ) ನಾನೇ ಸಾಕ್ಷಿ, ಸರ್ವಭೂತಗಳಲ್ಲಿ ವಾಸಿಸುವವನೂ ನಾನೇ (ನಿವಾಸಃ) ಸರ್ವರ ದುಃಖ ನಾಶಕನೂ ನಾನೇ (ಶರಣಂ) ಎಲ್ಲರ ಮಿತ್ರತ್ವಹಾಗೂ ಮಿತ್ರನೂ ನಾನೆ (ಸುಹೃತ್) (ನಾನೇ ಆರಂಭ) ನಾನೇ ಅಂತ್ಯ,

(ಬೀಜಮವ್ಯಯಮ್) ಇದಕ್ಕಿಂತ ವಿವರವಾಗಿ ಇನ್ನೇನನ್ನು ಹೇಳಬೇಕಾಗಿದೆ. ಋಗ್ವೇದದ ದೇವೀಸೂಕ್ತದಲ್ಲಿ 'ಅಹಂ' ಎಂಬ ಪದಕ್ಕೆ ಇಲ್ಲಿಯ ವಾಚ್ಯಾರ್ಥವಾಗಿ ಪ್ರಯೋಗವಾಗಿರುವ 'ಅಹಂ' ಶಬ್ದಾರ್ಥಕ್ಕೂ ವ್ಯತ್ಯಾಸವಿಲ್ಲ. ದೈವೀ ಶಕ್ತಿಗೆ ಲಿಂಗ ಭೇದವಿಲ್ಲ. ಅದು ಮಹಾಶಕ್ತಿ. ಅದು ಅನುಭವಗಮ್ಯ ಮಾತ್ರ. ಅದನ್ನು ಮಾತಿನಿಂದಾಗಲೀ, ಸೋದೋಹರಣೆಗಳಿಂದಾಗಲೀ ನಿರೂಪಿಸಲಾಗದು. ಸರ್ವವೂ, ದೇವೀ ಮಯವೆಂಬುದೊಂದೇ ಸತ್ಯ. ಆದುದರಿಂದಲೇ ವಿವಿಧರೂಪಗಳಿದ್ದರೂ ಏಕರೂಪವೇ ಸ್ಥಿರವಾದುದು ಅದೇ ಸತ್ಯವಾದುದು.

ಯಾವುದು ಸತ್ಯವಾದುದು ? 'ತತ್‌ಸತ್' ಅದು ಸತ್ಯವಾದುದು ಅದು ಯಾವುದು? ಯಾವುದು ಚರಾಚರಗಳಲ್ಲಿ ವ್ಯಾಪ್ತವಾಗಿರುವುದೋ, ಯಾವುದರ ಶಕ್ತಿಯಿಂದ ಚರಾಚರಗಳೆಲ್ಲವೂ ತನ್ನ ಕೆಲಸವನ್ನು ನಿರ್ವಹಿಸುವುದೋ, ಯಾವುದರ ಅಪ್ಪಣೆಯಂತೆ ಗಾಳಿ ಬೀಸುವುದೋ, ಭೂಮಿ ಚಲಿಸುವುದೋ, ಸೂರ್ಯನು ಬೆಳಗುವನೋ, ಅದೇ ಸತ್ಯವಾದುದು. ಅದು ಗೋಚರವಾದುದೇ ? ಹೌದು ಗೋಚರವಾಗುತ್ತದೆ. ಹಾಗಾದರೆ ಹೇಗೆ ? ಯಾವ ರೂಪಿನಲ್ಲಿ ? ಎಲ್ಲಿ? ಯಾವಾಗ? ಇತ್ಯಾದಿ ಪ್ರಶ್ನೆಗಳಿಗೆ ನಮ್ಮ ಋಷಿಗಳು ಸರಿಯಾದ ಉತ್ತರ ನೀಡಿದ್ದಾರೆ. ಸ್ಮೃತಿಗಳು **"ಸರ್ವಭೂತ ನಿವಾಸೋಽಸಿ"** ಎಂದು ಸಾರುತ್ತವೆ. ಅದು ಇಲ್ಲದ ಸ್ಥಳವಿಲ್ಲ ಅದಲ್ಲದೇ ಬೇರಾವುದೂ ಇಲ್ಲ. ಅದರ ರೂಪವೇ ಭಿನ್ನ ಭಿನ್ನ ರೂಪದಲ್ಲಿ ವ್ಯಕ್ತವಾಗುತ್ತದೆ. ಭಿನ್ನತೆಯಲ್ಲಿ ಏಕತೆ ಭಾರತೀಯಸಿದ್ಧಾಂತ. ವೈಕೃತಿಕ ರಹಸ್ಯದಲ್ಲಿ

**ನವ ಸ್ಯಾಃ ಶಕ್ತಯಃ ಪೂಜ್ಯಾಸ್ತದಾ ರುದ್ರವಿನಾಯಕೌ |**
**ನಮೋ ದೇವ್ಯಾ ಇತಿ ಸ್ತೋತ್ರೈರ್ಮಹಾಲಕ್ಷ್ಮೀಂ ಸಮರ್ಚಯೇತ್ ||**

ನವ ಶಕ್ತಿಗಳಎಡ ಭಾಗದಲ್ಲಿ" ಗಣೇಶನ ಪೂಜೆಯನ್ನು ಮಾಡಬೇಕು. 'ನಮೋದೇವ್ಯೈ' ಎಂಬ ಸ್ತೋತ್ರದಿಂದ ಮಹಾಲಕ್ಷ್ಮಿಯನ್ನು ಅರ್ಚಿಸಬೇಕು ಎನ್ನುತ್ತದೆ. "ನವಸ್ಯಾಯಾಃ" ಶಕ್ತಿಗಳು ಎಂದು ಸವಿಸ್ತಾರವಾಗಿ ವಿವರಿಸಿರುತ್ತಾರೆ. **ನವಶಕ್ತಿಗಳೇ ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ನಾರಾಸಿಂಹೀ, ಐಂದ್ರೀ, ಶಿವದೂತೀ, ಮತ್ತು ಚಾಮುಂಡಾ,** ಈ ಸರ್ವ ಶಕ್ತಿಗಳೂ ದೇವಿಯ ಅಂಶಗಳೇ ಆದುದರಿಂದ ಯಾವ ನಾಮದಿಂದ ದೇವಿಯನ್ನು ಪೂಜಿಸಿದರೂ, ಅದು ಅದೇ ಮಹಾಮಾತೆಗೆ ಸಲ್ಲುತ್ತದೆ. ನಾರಾಯಣೀ ಸ್ತುತಿಯಲ್ಲಿ ದೇವಿಯನ್ನು **'ಸರ್ವಭೂತ ಯದಾದೇವಿ'**- ಸರ್ವಭೂತಗಳ ಅಂತರಂಗದಲ್ಲಿ ನೆಲೆಸಿರುವವಳು ಎಂದು ಸ್ತುತಿಸುತ್ತೇವೆ. 'ಸೃಷ್ಟಿ, ಸ್ಥಿತಿ, ವಿನಾಶಾನಾಂ ಶಕ್ತಿಭೂತೇ ಸನಾತನಿ' ಎಂದು ಪೂಜಿಸುತ್ತೇವೆ. ಸೃಷ್ಟಿಸ್ಥಿತಿ ಮತ್ತು ಲಯಗಳನ್ನು ಮಾಡಬಲ್ಲವಳು, ಶಕ್ತಿಸ್ವರೂಪಳು, ಸನಾತನಳು ಎಂದು ಭಜಿಸುತ್ತೇವೆ. ಅವಳು ಸರ್ವಶಕ್ತಿ ಸಂಪನ್ನಳೆಂದು ಹೇಳುವ ಉದಾಹರಣೆಗಳು ಅಗಣಿತ.

ಅವಳು ಹಂಸಯುಕ್ತೆಯಾಗಿರುವಾಗ ಬ್ರಹ್ಮಾಣೀ ಎಂದು ಪೂಜಿಸುತ್ತೇವೆ. ವೃಷಭ ವಾಹಿನಿಯಾಗಿರುವಾಗ ಮಾಹೇಶ್ವರೀ ಎನ್ನುತ್ತೇವೆ. ಶಂಖ ಚಕ್ರಗಳನ್ನು ಧರಿಸಿರುವಾಗ ವೈಷ್ಣವೀ ಎನ್ನುತ್ತೇವೆ. ನವಿಲುವಾಹನ ವಾಗಿರುವಾಗ ಕೌಮಾರೀ ಎನ್ನುತ್ತೇವೆ. ಮಹಾಚಕ್ರವನ್ನು ಹಿಡಿದು ಕೋರೆದಾಡೆಗಳಿರುವಾಗ ವಾರಾಹೀ ಎಂದು ಪೂಜಿಸುತ್ತೇವೆ. ವಜ್ರಾಯುಧವನ್ನು ಧರಿಸಿರುವಾಗ ಇಂದ್ರಾಣೀ ಎನ್ನುತ್ತೇವೆ. ಮನುಷ್ಯರ ರುಂಡಗಳಿಂದ ಮಾಲೆ ಧರಿಸಿದವಳಾಗಿ ಸಿಂಹವಾಹಿನಿಯಾಗಿರುವಾಗ ಚಾಮುಂಡಾ ಎನ್ನುತ್ತೇವೆ. ನಮ್ಮ ಪ್ರಾರ್ಥನೆಯನ್ನು ಸ್ವೀಕರಿಸು ಎಂದು ದೇವಿಯನ್ನು ವಿವಿಧ ಸ್ತೋತ್ರಗಳಿಂದ ಋಷಿಗಳೂ ಮುನಿಗಳೂ ಸ್ತುತಿಸುತ್ತಾರೆ.

ಅವಳು ಸರ್ವಸ್ವರೂಪಳು, ನಾಮ ಹಲವು, ಅವಳೇ ಸತ್ಯ, ಅವಳೇ ಶಾಶ್ವತ. ಅವಳು ಒಂದೇ ಆಗಿದ್ದಾಳೆ ಇದು ಸಕಲ ವೇದಗಳ ಸಾರ.

ಶುಂಭನೊಂದಿಗೆ ಯುದ್ಧ ಮಾಡುವಾಗ ಶುಂಭನು ದೇವಿಯನ್ನು ಹೀಯಾಳಿಸುತ್ತಾನೆ. ಹಲವಾರು ಗಣಗಳ ಶಕ್ತಿಯಿಂದ ಯುದ್ಧ ಮಾಡುವ ನೀನು ಹೇಡಿ ಎಂದು ಲೇವಡಿ ಮಾಡುತ್ತಾನೆ. ಆಗ ದೇವಿಯು 'ಈ ಜಗತ್ತಿನಲ್ಲಿ ನಾನೊಬ್ಬಳೇ ಇರುತ್ತೇನೆ. ನನಗೆ ಎರಡನೆಯವರಾಗಿ ಯಾರಿದ್ದಾರೆ ? ಎಲೈ ದುಷ್ಟನೇ ನನ್ನ ಈ ಮಹಿಮಾ ಶಕ್ತಿಗಳೆಲ್ಲವೂ ನನ್ನಲ್ಲಿ ಪ್ರವೇಶಿಸುವುದನ್ನು ನೋಡು' ಎನ್ನುತ್ತಾಳೆ. ಆಗ **'ತತಸ್ಸಮಸ್ತಾಸ್ತಾದೇವ್ಯೋ ಬ್ರಹ್ಮಾಣೀ ಪ್ರಮುಖಾ ಲಯಮ್'** ಬ್ರಹ್ಮಾಣೀ ಮೊದಲಾದ ಸಕಲದೇವತೆಗಳೂ (ಸಪ್ತಮಾತೃಕೆಯರು) ಅವಳನ್ನು ಪ್ರವೇಶಿಸಿ ಅವಳಲ್ಲಿ ಐಕ್ಯವಾದರು. (ಮಾರ್ಕಂಡೇಯ ಪುರಾಣ ಅಧ್ಯಾಯ ೧೦ ಶ್ಲೋಕ ೮ ) ಅನಂತರ ಹೀಗೆ ಉತ್ತರಿಸಿದಳು.

**ಅಹಂ ವಿಭೂತ್ಯಾ ಬಹುಭಿರಿಹ ರೂಪೈರ್ಯದಾ ಸ್ಥಿತಾ |**
**ತತ್ಸಂಹೃತಂ ಮಯೈಕೈವ ತಿಷ್ಠಮ್ಯಾಜೌಸ್ಥಿರೋ ಭವ ||**

*(ಮಾ.ಪು. ಅ.೧೦ ಶ್ಲೋಕ ೮)*

ನಾನು ನನ್ನ ಮಹಿಮೆಯಿಂದ ಅನೇಕ ರೂಪಗಳನ್ನು ತೋರುತ್ತಿದ್ದೇನೆ. ಈಗ ಅವು ನನ್ನಿಂದಲೇ ಉಪಸಂಹರಿಸಲ್ಪಟ್ಟಿವೆ. ಏಕೈಕಳಾಗಿಯೇ ನಿಂತಿರುತ್ತೇನೆ. ಯುದ್ಧದಲ್ಲಿ ಸ್ಥಿರನಾಗು ಎನ್ನುತ್ತಾಳೆ. ದೇವಿ ಹಲವಾರು ರೂಪಧಾರಿಣಿಯಾದರೂ ಯಾವಾಗ ಹೇಗೆ ಬೇಕೆಂದರೆ ಹಾಗೆ ತನ್ನ ಶಕ್ತಿಯನ್ನು ತೋರುವುದರಲ್ಲಿ ಮಹಾ ಮಹಿಮಳಾಗಿರುತ್ತಾಳೆ.

ದೇವಿಯ ರೂಪವೆಂದರೆ ಸರ್ವಶಕ್ತಿಗಳ ಸಂಗಮ **'ಅನ್ಯೈರಪಿ ಸುರೈರ್ದೇವೀ ಭೂಷಣೈರಾಯುಧೈಸ್ತಥಾ'** *(ಮಾ.ಪ್ರ. ಅ.೨ ಶ್ಲೋ ೩೧)* ಹೀಗೆ ಸರ್ವ (ಇತರ) ದೇವತೆಗಳಿಂದಲೂ ಆಯುಧ ಭೂಷಣಗಳನ್ನು ಒಪ್ಪಿದ ದೇವಿಯು ಅಟ್ಟಹಾಸದಿಂದ ಪರಿಶೋಭಿತಳಾದಳು. ಸರ್ವ ದೇವತೆಗಳ ಶಕ್ತಿಯೂ ಅವಳಲ್ಲಿ ಐಕ್ಯವಾದುದನ್ನು ಕಾಣುತ್ತೇವೆ. ಆದುದರಿಂದಲೇ ದೇವಿಯನ್ನು ಪೂಜಿಸುವುದರಿಂದ

ಸರ್ವದೇವತೆಗಳನ್ನೂ ಪೂಜಿಸಿದಂತಾಗುತ್ತದೆ. ಅಂತಹ ಮಹಾಮಾತೆಯನ್ನು ಪೂಜಿಸುವುದು ಸರ್ವ ಶ್ರೇಷ್ಠವಾದುದು.

'ಸಾ ತು ಕರ್ಮಜ್ಞಾನಯೋಗೇಭ್ಯೋಽಧಿ ಕತರಾ " *(ನಾರದಭಕ್ತಿಸೂತ್ರ ೨೫.)*

ನಿಜವಾದ ಶುದ್ಧವಾದ ಪವಿತ್ರವಾದ ದೈವೀ ಭಕ್ತಿಯು ಕರ್ಮ, ಜ್ಞಾನ, ಮತ್ತು ಯೋಗಗಳಿಗಿಂತ ಮಿಗಿಲಾದುದು ಎಂದು ತಿಳಿಸುತ್ತಾರೆ. ನಿಜವಾದ ಭಕ್ತಿಯು ದೇವಿಯ ಬಳಿಗೆ ಒಯ್ಯುತ್ತದೆ. ಆದುದರಿಂದ ಸಗುಣೋಪಾಸನೆ ಪ್ರಧಾನವಾಗಿ ಭಕ್ತಿಯತ್ತ ತಿರುಗಿದಾಗ ಭಕ್ತನು ದೇವೀಮಯನಾಗುತ್ತಾನೆ. 'ಸರ್ವಮಯಾ ದೇವೀ' ಎಂಬ ತತ್ತ್ವವನ್ನು ಅನುಭವಿಸುವವನಾಗುತ್ತಾನೆ.

ಭಾರತ ಅಧ್ಯಾತ್ಮಸಂಪತ್ತಿನ ಆಗರ. ವಿಶ್ವದ ಸಾಹಿತ್ಯವೆಲ್ಲವೂ ಅಳಿದರೂ ಸರಿ ಈಶಾವಾಸ್ಯೋಪನಿಷತ್ತಿನ ಒಂದು ಶ್ಲೋಕ ಉಳಿದರೆ ಸಾಕು ಇಡೀ ಸಾಹಿತ್ಯವನ್ನು ಸೃಷ್ಟಿಸಬಹುದೆಂದು ಗಾಂಧೀಜಿ ಹೇಳಿರುತ್ತಾರೆ. ಅಂದರೆ ಉಪನಿಷತ್ತಿನ ಒಂದು ಶ್ಲೋಕದ ಮಹಿಮೆ ಎಂತಹದು ಎಂದು ಅರಿವಾಗುತ್ತದೆ. ಭಾರತವು ಭಿನ್ನತೆಯಲ್ಲಿ ಏಕತೆಯನ್ನು ಸಾರುವ ದೇಶ. ಅದು ಇದರ ಸತ್ತ್ವಗುಣ. ಆ ಸತ್ತ್ವವೇ ಅಂದೂ ಇಂದೂ ಎಂದೂ ಈ ದೇಶವನ್ನು ಒಂದು ಗೂಡಿಸಿಕೊಂಡು ಬಂದಿರುವ ಭದ್ರ ಬುನಾದಿಯಾಗಿದೆ. ದೇಶದ ಏಕತೆಗೆ ದೇವೀಸಂಪತ್ತು ಒಂದು ದೊಡ್ಡ ಆಸ್ತಿ. ದೇವೀ ಪೀಠಗಳು ದೇಶದ ಎಲ್ಲೆಡೆ ಸ್ಥಾಪನೆಗೊಂಡಿವೆ. ದೇವೀ ಶಕ್ತಿಯ ಅರಿವು ಎಲ್ಲೆಡೆ ವ್ಯಕ್ತವಾಗುತ್ತದೆ. ಆಚಾರ್ಯ ಶಂಕರರು ಆದುದರಿಂದಲೇ ಪಂಚಾಯತನ ಪೂಜೆಯಲ್ಲಿ ದೇವೀಶಕ್ತಿಯನ್ನೂ ಸೇರಿಸಿರುತ್ತಾರೆ.

ಭಾರತದ ಸಂಸ್ಕೃತಿಯಲ್ಲಿ ದೇವಿ ನೆಲೆಸಿರುವ ಕ್ಷೇತ್ರವನ್ನು ಬಹು ಗೌರವ ಭಾವದಿಂದ ಪೂಜಿಸುವ ಪದ್ಧತಿ ಬಹಳ ಪುರಾತನವಾದುದು. ಇಂತಹ ಸ್ಥಳಗಳನ್ನು 'ಪೀಠ' ವೆನ್ನುತ್ತೇವೆ. ಈ ಪೀಠಗಳಲ್ಲಿ ಒಂದೊಂದು ಸ್ಥಳದಲ್ಲಿ ಒಂದೊಂದು ಹೆಸರಿನಿಂದ ದೇವಿಯನ್ನು ಪೂಜಿಸುತ್ತೇವೆ. ಪ್ರತಿ ಕ್ಷೇತ್ರದಲ್ಲೂ ದೇವಿಯನ್ನು ಬೇರೆ ಬೇರೆ ಹೆಸರಿನಿಂದ ಕರೆದರೂ ಮೂಲರೂಪ ಒಂದೇ ಆಗಿರುತ್ತದೆ. ಆದುದರಿಂದ ಹಲವು ಹತ್ತು ನೂರು ನಾಮವಿಶೇಷಗಳಿಂದ ದೇವಿಯನ್ನು ಸ್ಮರಿಸಿದರೂ ಎಲ್ಲವೂ ಒಂದೇ ದೇವಿಯ ನಾಮವಿಶೇಷವೆಂದೂ ಒಂದೇ ರೀತಿಯ ಭಕ್ತಿಯನ್ನು ಸಮರ್ಪಿಸುತ್ತೇವೆ.

ದಕ್ಷಬ್ರಹ್ಮನ ಯಜ್ಞದಲ್ಲಿ ಅವಮಾನಿತಳಾದ ದೇವಿಯು ಅಗ್ನಿಕುಂಡದಲ್ಲಿ ಪ್ರಾಣತ್ಯಾಗ ಮಾಡುತ್ತಾಳೆ. ಅದನ್ನು ಅರಿತ ಪರಶಿವನು ಅಲ್ಲಿಗೆ ಬಂದು ದೇವಿಯ ಶರೀರವನ್ನು ತನ್ನ ಭುಜದ ಮೇಲಿರಿಸಿಕೊಂಡು ಮಹಾರುದ್ರನಾಗಿ ನರ್ತನ ಮಾಡ ತೊಡಗುತ್ತಾನೆ. ಲೋಕಗಳೆಲ್ಲವೂ ತಲ್ಲಣಗೊಳ್ಳುತ್ತವೆ. ರುದ್ರನಾಟ್ಯವನ್ನು ನಿಲ್ಲಿಸುವುದಾದರೂ ಹೇಗೆ, ನಿಲ್ಲಿಸದಿದ್ದರೆ ಪ್ರಪಂಚವೆಲ್ಲವೂ ಅಲ್ಲೋಲ

ಕಲ್ಲೋಲವಾಗಿ ಬಿಡುತ್ತದೆ. ದೇವತೆಗಳ ಪ್ರಾರ್ಥನೆಯಂತೆ ಮಹಾ ವಿಷ್ಣುವು ಉಪಾಯಾಂತರದಿಂದ ಪರಮೇಶ್ವರನ ಹೆಗಲಿನ ಭಾರವು ಸ್ವಲ್ಪ ಸ್ವಲ್ಪವಾಗಿ ಕಡಿಮೆಯಾಗುವಂತೆ ಮಾಡುತ್ತಾನೆ. ದೇವಿಯ ಶರೀರದ ತುಣುಕುಗಳು ಶಿವನ ಭುಜದಿಂದ ಜಾರಿ ಬೀಳತೊಡಗುತ್ತವೆ. ಹಾಗೆ ಬಿದ್ದ ಸ್ಥಳಗಳೆಲ್ಲವೂ ದೇವೀ ಪೀಠಗಳೆಂದು ಮಾನ್ಯಗಳಾಗಿವೆ. ಅಂತಹ ತುಣುಕುಗಳು 51 ಸ್ಥಳಗಳಲ್ಲಿ ಬಿದ್ದವೆಂದು ಹೇಳುತ್ತಾರೆ. ದೇವಿಯ ಶಕ್ತಿಯನ್ನು ಭಕ್ತರು ಈ ಪೀಠಗಳಲ್ಲಿ ದರ್ಶನ ಮಾಡಿ ಪುನೀತರಾಗುತ್ತಾರೆ. ಅಂದರೆ ಈ ದೇಶದ ಅಖಂಡತೆಯ ರಕ್ಷಣೆಗೆ ದೇವಿಯು ಹೇಗೆ ಕಾರಣೀಭೂತಳಾಗಿದ್ದಾಳೆ ಎಂದು ಅರ್ಥವಾಗುತ್ತದೆ, ಅಖಂಡ ಭಾರತದ ಭಾವೈಕ್ಯಕ್ಕೆ ದೈವೀಶಕ್ತಿಯು ಹೇಗೆ ಅಡಿಗಲ್ಲಾಗಿದೆ ಎಂದು ಅರ್ಥವಾಗುತ್ತದೆ. ಆದುದರಿಂದಲೇ ದೇವಿಯನ್ನು ಭಾರತಮಾತೆಯೆಂದು ಪೂಜಿಸುತ್ತೇವೆ. ಅವಳ ಸ್ತುತಿಯೇ **'ವಂದೇ ಮಾತರಂ'**. ತಾಯೆ ವಂದಿಸುತ್ತೇನೆ ಎಂದು ಸ್ತುತಿಸುತ್ತೇವೆ. ಅದೇ ಮಂತ್ರ ಶಕ್ತಿಯಾಗಿ ಜನರ ನಾಡಿ ನಾಡಿಗಳಲ್ಲಿ ಪ್ರವಹಿಸಿ ಅಧ್ಯಾತ್ಮಶಕ್ತಿಯಾಗಿ ರಾಷ್ಟ್ರಶಕ್ತಿಯಾಗಿ ಪ್ರವಹಿಸಿ ಭಾರತದ ಸ್ವಾತಂತ್ರ್ಯಕ್ಕೆ ಕಾರಣವಾಯಿತು. ಹೀಗೆ ಈ ದಿವ್ಯಶಕ್ತಿಯ ಅವತಾರವು ಯಾವಾಗ ಯಾವ ರೂಪದಲ್ಲಿ ವ್ಯಕ್ತವಾಗುತ್ತದೆ ಎಂಬ ಅರಿವು ಆಯಾಯಾ ಅವತಾರ ವಿಶೇಷದಿಂದಲೇ ಅರಿಯಬೇಕಾಗುತ್ತದೆ. ರಕ್ತಬೀಜನನ್ನು ಸಂಹರಿಸಿದಂತೆ ದೇವಿಯು ತನ್ನ ಸಹಸ್ರನಾಲಿಗೆಗಳ ರೂಪದಂತೆ ಶತ್ರುಗಳನ್ನು ಪೂರ್ಣವಾಗಿ ನಿಷ್ಕ್ರಿಯಗೊಳಿಸಿ ತನ್ನ ಮಾಹಾತ್ಮ್ಯೆಯನ್ನು ಬೆಳಗಿದಳು. ಆದುದರಿಂದ ದೇವಾಲಯದಲ್ಲಿ ಕುಳಿತು ಪೂಜೆ ಗೊಳ್ಳುವವರು ಮಾತ್ರವಲ್ಲ ಬೇಡಿದವರಿಗೆ ಬೇಡಿದುದನ್ನು ಅನುಗ್ರಹಿಸುವಲ್ಲಿ ಜ್ಞಾನದಾಯಿನೀ, ಶಕ್ತಿದಾಯಿನಿ. ಆದುದರಿಂದಲೇ ಭಾರತದ ಸ್ವತಂತ್ರ ಸಂಗ್ರಾಮದಲ್ಲಿ ಶಕ್ತಿದಾಯಿನಿಯಾಗಿ ಪೂಜೆಗೊಂಡಳು ಅವಳೇ ರಾಷ್ಟ್ರದ ಭಾವೈಕ್ಯಕ್ಕೆ ಶಕ್ತಿದಾಯಿನಿ. ಆದುದರಿಂದಲೇ ದೇವಿಯ ಆರಾಧಕರು ಎಂದೂ ಮಾನ್ಯರು. ಶ್ರೀ ರಾಮಕೃಷ್ಣ ಪರಮಹಂಸರು ಕಾಳಿಯ ರೂಪಿನಲ್ಲಿ ರಾಷ್ಟ್ರದ ಉಳಿವನ್ನು ಕಂಡರು. ಶ್ರೀ ರಾಮಕೃಷ್ಣ ಪರಮಹಂಸರು ರಾಷ್ಟ್ರದ ಜಾಗೃತಿಗಾಗಿಯೇ ನರೇಂದ್ರನಿಗೆ ದೇವೀತಪಸ್ಸಿನ ಶಕ್ತಿಯನ್ನು ಧಾರೆ ಎರೆದರು. ಅವರೇ ಮುಂದೆ ವಿವೇಕಾನಂದರಾಗಿ ರಾಷ್ಟ್ರೀಯ ಜಾಗೃತಿಗಾಗಿ ಶ್ರಮಿಸಿದರು. ಸ್ವತಂತ್ರತೆಯ ಭಾವನೆಯ ಬೀಜ ಬಿತ್ತಿದರು. ಹೀಗೆ ದೇವೀ ಮಹಿಮೆಯನ್ನು ಯಾವ ರೀತಿಯಿಂದ ವರ್ಣಿಸಿದರೂ ಮುಗಿಸಲಾಗದ ಮಾಹಾತ್ಮ್ಯೆಯಾಗಿದೆ.

ಭಗವದ್ಗೀತೆಯು 'ಸರ್ವಾಖಿಲಂ ಪಾರ್ಥ ಜ್ಞಾನೇ ಪರಿಸಮಾಪ್ಯತೇ' ಎಂದು ವಿವರಿಸುತ್ತದೆ. 'ನ ಹಿ ಜ್ಞಾನೇನ ಸದೃಶಂ' ಎಂದೂ ಬೋಧಿಸುತ್ತದೆ. ಜ್ಞಾನಕ್ಕಿಂತ ಮಿಗಿಲಾದುದು ಇಲ್ಲ. ಆದುದರಿಂದ ಜ್ಞಾನದ ತಳಹದಿಯ ಮೇಲೆಯೇ ಆಚಾರ್ಯ ಶಂಕರರು ತಮ್ಮ ತತ್ತ್ವವನ್ನು ಪ್ರತಿಪಾದಿಸಿದರು. ಪ್ರಧಾನಚರ್ಚೆಯಾದ ಮಂಡನ ಮಿಶ್ರ ಮತ್ತು ಶ್ರೀಶಂಕರರ ವಾಗ್ವಾದವು ಕರ್ಮಕಾಂಡ ಮತ್ತು ಜ್ಞಾನಕಾಂಡಗಳನ್ನು

ಕುರಿತಾದುದೇ ಆಗಿದೆ. ಅಂತಹ ಜ್ಞಾನ ಮಾರ್ಗದಿಂದ ಆಚಾರ್ಯರು ಸತ್ಯದ ಸಮ್ಯಕ್ ದರ್ಶನವನ್ನು ಮಾಡಿಸುತ್ತಾರೆ.

ಒಂದೇ ಒಂದು ವಸ್ತು ವಿಶೇಷವನ್ನು ಹತ್ತು ಹಲವಾರು ಹೆಸರುಗಳಿಂದಲ್ಲ, ಸಹಸ್ರನಾಮಗಳಿಂದಲ್ಲ, ಹಲವು ಸಹಸ್ರನಾಮಗಳಿಂದ ಅರ್ಚಿಸುತ್ತೇವೆ. ಹಾಗಿದ್ದರೂ ಅಂತಹ ಚಿತ್ ಚೇತನದ ವ್ಯಾಖ್ಯೆ ಮುಗಿಯುವುದಿಲ್ಲ. ಕಾರಣವೆಂದರೆ ಅದು ವಾಕ್ ಶಕ್ತಿಗೆ ಸಿಲುಕದುದು ಮತ್ತು ನಿಲುಕದುದು ಆಗಿದೆ. ಅದುದರಿಂದ ಅಂತಹ ದಿವ್ಯ ಶಕ್ತಿಯನ್ನು ಯಾವ ರೀತಿಯಿಂದ ವರ್ಣನೆ ಮಾಡಿ ಪೂರೈಸಲು ಸಾಧ್ಯ. ಅವರವರ ಮನಸ್ಸು, ಅವರವರ ತೃಪ್ತಿಗೆ ಅನುಕೂಲವಾಗಿ ಏನನ್ನಾದರೂ ಮಾಡಬಹುದು. ಅದೇ ಭಿನ್ನತೆಯಲ್ಲಿ ಏಕತೆ.

ಸತ್ಯದ ದರ್ಶನ ಪಡೆಯಲು ಒಂದು ಗೊತ್ತಾದ ನೆಲೆಯಲ್ಲಿ ಒಂದು ಗೊತ್ತಾದ ಮೂರ್ತಿಯ ಮುಖಾಂತರ ದಿವ್ಯ ಅನುಭವ ಪಡೆಯುವುದು ಸುಲಭ. ಆದುದರಿಂದಲೇ ಶ್ರೀಮದಾಚಾರ್ಯರು ಸುಲಭವಾದ ಭಕ್ತಿಮಾರ್ಗದ ಮುಖಾಂತರ ಮೋಕ್ಷಸಾಧನೆಗೆ ದಾರಿತೋರುತ್ತಾರೆ. ದೇವಿಯ ಪೂಜೆಯ ಮುಖಾಂತರ ಸತ್ಯದ ಸಾಕ್ಷಾತ್ಕಾರ ಮಾಡಿಸುತ್ತಾರೆ. ಸರ್ವಾತ್ಮಭಾವದ ದರ್ಶನ ಮಾಡಿಸುತ್ತಾರೆ. ಸರ್ವವೂ ಒಂದರ ಮೂಲದಿಂದಲೇ ಬಂದ ಶಕ್ತಿ ಎಂಬುದನ್ನು ವ್ಯಕ್ತಪಡಿಸುತ್ತಾರೆ. ಭೋರ್ಗರೆವ ಜಲಪಾತದಿಂದ ಧುಮ್ಮಿಕ್ಕುವ ಜಲಪಾತದಲ್ಲಿ ಚಿಮ್ಮಿ ಬರುವ ಹನಿಗಳೆಲ್ಲವೂ ಅಗಾಧ ಜಲರಾಶಿಯ ತುಣುಕುಗಳೇ ಅಲ್ಲವೇ ? ಆಯಾಯಾ ಸನ್ನಿವೇಶಕ್ಕೆ ತಕ್ಕಂತೆ ಹನಿಗಳಾಗಿ, ಝರಿಗಳಾಗಿ, ಭೋರ್ಗರೆಯುತ್ತವೆ ಅಲ್ಲವೇ ? ಹನಿಯೇ ಆದರೂ, ಅಗಾಧಜಲರಾಶಿಯ ಸರ್ವಗುಣಗಳನ್ನೂ ಹೊಂದಿರುವುದಲ್ಲವೇ ? ಮೂಲ ಗುಣದಲ್ಲಿ ವ್ಯತ್ಯಾಸವಿರುವುದಿಲ್ಲ ಅಲ್ಲವೇ ? ಹಾಗೆಯೇ ಒಂದು ಸ್ಥಳದಲ್ಲಿ ಧುಮ್ಮಿಕ್ಕಿ ಭೋರ್ಗರೆದು ಭಯಂಕರ ರುದ್ರನಾಟ್ಯವನ್ನು ಪ್ರದರ್ಶಿಸಿದರೆ ಮತ್ತೊಂದೆಡೆ ಲೋಕ ಪಾವನೆಯಾಗಿ, ಮಂಗಳೆಯಾಗಿ ನಿಧಾನವಾಗಿ ಪ್ರವಹಿಸಿ ಲೋಕರಕ್ಷಣೆ ಮಾಡುವಳಲ್ಲವೆ ? ಆಯಾಯಾ ಸನ್ನಿವೇಶಕ್ಕೆ ಭೋರ್ಗರೆದರೂ, ಶಾಂತಳಾದರೂ ನದಿ ಒಂದೇ ಅಲ್ಲವೆ ! ಅಂತೆಯೇ ದಿವ್ಯಶಕ್ತಿಯು ಅಗತ್ಯಕ್ಕೆ ತಕ್ಕಂತೆ ಅವತರಿಸುತ್ತದೆ. ಅವತಾರವಿಶೇಷಗಳಿಂದ ದಿವ್ಯಚೇತನದ ಅನುಭವ ಪಡೆಯಬಹುದು. ಹೇಗೆ ಹನಿ ನೀರಿನಲ್ಲಿ ನೀರಿನ ಎಲ್ಲಾ ಗುಣಗಳ ಅನುಭವ ಪಡೆಯಬಹುದೋ ಅಂತೆಯೇ ನಮಗೊಪ್ಪುವ ಮೂರ್ತಿಯಲ್ಲಿ ದೈವತ್ವದ ಸರ್ವಗುಣಗಳನ್ನೂ ಪಡೆಯ ಬಹುದಾಗಿದೆ. ಅದನ್ನೇ ನಾವು ಹಲವು ಮೂಲ ಒಂದೇ ಎಂದು ಹೇಳುತ್ತೇವೆ.

ಆಚಾರ್ಯ ಶ್ರೀಶಂಕರ ಭಗವತ್ಪಾದರು ಜ್ಞಾನ ಯೋಗವೇ ಪರಮೋತ್ಕೃಷ್ಟವಾದುದೆಂದು ನಿರೂಪಿಸಿದರು. ಅಂತಹ ಜ್ಞಾನಮಾರ್ಗದಲ್ಲಿ ಸರ್ವಸ್ವವನ್ನೂ ಅರಿಯಲು ಭಕ್ತಿ ಮಾರ್ಗವು ಹೇಗೆ ಸುಲಭೋಪಾಯವೆಂಬುದನ್ನು ಚೆನ್ನಾಗಿ ಮನಗಂಡಿದ್ದರು. ಸಚ್ಚಿದಾನಂದಸ್ವರೂಪವನ್ನು ಅರಿಯಲು ಭಕ್ತಿಮಾರ್ಗ

ಸುಲಭೋಪಾಯವೆಂಬುದನ್ನು ಹಲವಾರು ಸ್ಥಳಗಳಲ್ಲಿ ನಿರೂಪಿಸಿರುತ್ತಾರೆ.

ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮನೂ ಸಹ ಸಗುಣೋಪಾಸನೆಯಿಂದ ಜ್ಞಾನ ಪ್ರಾಪ್ತಿಯಾಗುತ್ತದೆ ಎಂಬುದನ್ನು ನಿರೂಪಿಸಿರುತ್ತಾನೆ. ಬ್ರಹ್ಮಸೂತ್ರ ಭಾಷ್ಯದಲ್ಲಿ (1-1-20) ಸಗುಣೋಪಾಸನೆಯನ್ನೂ ಅದರ ಅಗತ್ಯವನ್ನೂ ಎತ್ತಿ ಹಿಡಿದಿರುತ್ತಾರೆ. ವಿವೇಕ ಚೂಡಾಮಣಿಯಲ್ಲಿ ಮೋಕ್ಷವನ್ನು ಪಡೆಯಲು ಭಕ್ತಿ ಬಹು ಪ್ರಧಾನವೆಂದು ವಿವರಿಸಿರುತ್ತಾರೆ.

ಶ್ರೀಮದಾಚಾರ್ಯರು ಭಕ್ತಿಮಾರ್ಗ ಪ್ರವರ್ತಕರಾಗಿ ಗೋವಿಂದಾಷ್ಟಕ, ಕೃಷ್ಣಾಷ್ಟಕ, ಆನಂದಲಹರೀ, ದಕ್ಷಿಣಾಮೂರ್ತಿಸ್ತೋತ್ರ, ದಶಶ್ಲೋಕಿ, ಭಜ ಗೋವಿಂದಂ, ಹರೀಮೀಡೇಸ್ತೋತ್ರ, ಮನೀಷಾಪಂಚಕ, ಮತ್ತು ಸೋಪಾನ ಪಂಚಕಗಳನ್ನೂ ಸುಮಾರು ಹತ್ತೊಂಬತ್ತು ದೇವೀಸ್ತೋತ್ರಮಾಲೆಗಳನ್ನೂ ರಚಿಸಿರುತ್ತಾರೆ. ಆದುದರಿಂದ ನಮಗೆ ಒಪ್ಪುವ ನಮ್ಮದೇ ಆದ ದೈವದ ಆಧಾರದಿಂದ ಭಕ್ತಿಯನ್ನು ಬೆಳೆಸಿಕೊಂಡು ಆ ಮುಖಾಂತರ ದೇವೀ ಕೃಪೆಗೆ ಪಾತ್ರರಾಗಬೇಕೆಂದೇ ಹಲವಾರು ದೇವೀಸ್ತುತಿರತ್ನಮಾಲೆಗಳನ್ನು ರಚಿಸಿರುತ್ತಾರೆ.

ವಿಗ್ರಹದ ಮುಖಾಂತರ ಭಕ್ತರು ತನ್ನತನವನ್ನು ಮರೆತು ತನ್ನ ದೈವದ ಮೂರ್ತಿಯಲ್ಲಿ ಲೀನನಾಗುತ್ತಾನೆ. ತನ್ನನ್ನು ಮರೆತು ಅದರಲ್ಲಿ ತನ್ಮಯನಾಗುತ್ತಾನೆ. ಅದರಿಂದ ತಾನು ಪಡೆಯಬೇಕಾದುದನ್ನು ಪಡೆದು ಸಂತೃಪ್ತನಾಗುತ್ತಾನೆ. ಅದಕ್ಕಾಗಿಯೇ ಅವರವರು ಅವರವರಿಗೆ ತಕ್ಕದಾದ ದೇವಾಲಯಗಳ ಆಶ್ರಯ ಪಡೆಯುತ್ತಾರೆ. ಆದುದರಿಂದಲೇ ಅಂತಹ ದೇವಾಲಯಗಳು ಅತ್ಯಗತ್ಯ.

ಆದುದರಿಂದಲೇ ಅವರವರು ತಮ್ಮ ತಮ್ಮ ಭಾವನೆಗಳಿಗೆ ತಕ್ಕಂತೆ ತಮ್ಮದೇ ಆದ ಮಾರ್ಗವನ್ನು ಕಂಡುಕೊಳ್ಳಲು ವಿಶೇಷವಾಗಿ ದೇವೀ ಸ್ತೋತ್ರಗಳನ್ನು ರಚಿಸಿ ಭಕ್ತಜನರನ್ನು ಉದ್ಧರಿಸಿರುತ್ತಾರೆ. ಸಾರ್ವಜನಿಕ ಜೀವನದಲ್ಲಿ ಹೊಂದಿಬಾಳಬೇಕಾದ ಸಾಧಾರಣ ಜನರಿಗೆ ಈ ಗೊಂದಲದಿಂದ ಹೊರಬರಲು ಸಾಧ್ಯವಾಗುವುದಿಲ್ಲ. ಅಂತಹವರು ಸುಲಭವಾಗಿ ದೈವತ್ವವನ್ನು ಪಡೆಯಲು ಸುಲಭವಾದ ಮಾರ್ಗ ಭಕ್ತಿ. ಆದುದರಿಂದಲೇ ಭಕ್ತರು ಹೆಚ್ಚು ಹೊತ್ತು ತನ್ನ ದೇವತೆಯ ಆರಾಧನೆಯಲ್ಲಿ ಮಗ್ನನಾಗಿರಲೆಂದೇ ಹಲವಾರು ಉಪಚಾರವಿಧಿಗಳನ್ನು ರೂಪಿಸಿ ತನ್ನ ಇಷ್ಟದೇವತೆಯ ಚರಣಾರವಿಂದದಲ್ಲಿ ತನ್ಮಯನಾಗುವಂತೆ ಮಾಡಿದ್ದಾರೆ. ಎದುರಿಗಿರುವ ವಿಗ್ರಹದಲ್ಲಿ ಭಕ್ತನು ತನ್ನ ಇಷ್ಟದೇವತೆಯ ಸರ್ವರೂಪವನ್ನೂ ಸಕಲ ಕಲ್ಯಾಣ ಗುಣಗಳನ್ನೂ ಕಾಣುತ್ತಾನೆ. ಅದರಿಂದ ಅವನ ಪಾಲಿಗೆ ಒಂದು ನಿರ್ಜೀವ ವಸ್ತುವಾಗಿರದೆ, ತನ್ನ ಸರ್ವ ಅಭೀಷ್ಟಗಳನ್ನೂ ನೆರವೇರಿಸುವ ಶಕ್ತಿರೂಪವಾಗಿರುತ್ತದೆ. ಆದುದರಿಂದಲೇ ತಾನು ಅಪೇಕ್ಷಿಸಿದುದನ್ನು ಪಡೆಯುವವನಾಗುತ್ತಾನೆ.

ಭಕ್ತನಾದವನು ಸತ್ಯದ ಪರಾಕಾಷ್ಠೆಯನ್ನು ಅನುಭವಿಸುವುದೇ ಭಕ್ತಿ. ಅಂತಹ ಭಕ್ತಿ ಬರಲು ಶ್ರದ್ಧೆ ಬೇಕು. ಅಂತಹ ಶ್ರದ್ಧೆ ಬರಬೇಕಾದರೆ ಒಂದು ಆಧಾರ,

ಒಂದು ಗುರುತು ಬೇಕೇಬೇಕು. ಅದೇ ದೇವಾಲಯಗಳು, ವಿಗ್ರಹಗಳು, ಪೂಜಾ ವಿಧಿಗಳು ಇತ್ಯಾದಿ, ಇತ್ಯಾದಿ. ನಿರ್ಗುಣ ಉಪಾಸನೆಯನ್ನು ಸಗುಣದಲ್ಲಿ ಅನುಭವಿಸುವ ಭಾವುಕವಾದ ಭಾವನೆ. ಭಕ್ತನೂ ದೇವರೂ ಒಂದೇ ಒಂದು ನೆಲೆಯಲ್ಲಿ ಐಕ್ಯವಾದಾಗ ಅದು ಅದ್ವೈತದ ಭಾವನೆಯನ್ನು ಅನುಭವ ಗ್ರಾಹ್ಯವನ್ನಾಗಿ ಮಾಡುತ್ತದೆ. ಅದಕ್ಕಾಗಿಯೇ ಈ ಹೊರ ಜಗತ್ತಿನ ಆಡಂಬರ. ಒಂದು ಸಾರಿ ಅದ್ವೈತಾನುಭವವಾದರೆ ಜೀವನ್ಮುಕ್ತನಾಗುತ್ತಾನೆ. ಇಹಪರಗಳ ಜಂಜಾಟದಿಂದ ಹೊರ ಬಂದು ಮುಕ್ತಿ ಸಾಮ್ರಾಜ್ಯವನ್ನು ಗೆದ್ದು ತನ್ನದನ್ನಾಗಿಸಿಕೊಳ್ಳುತ್ತಾನೆ.

ಪುರಾಣಗಳಲ್ಲಿ, ಇತಿಹಾಸಗಳಲ್ಲಿ , ಮಹಾನ್ ಭಕ್ತರ ಜೀವನ ಚರಿತ್ರೆಯನ್ನು ನಾವು ಕಾಣುತ್ತೇವೆ. ಅಂತಹವರ ಜೀವನ ಚರಿತ್ರೆ ಜನರಿಗೆ ಕೈಗನ್ನಡಿ. ಅವರವರು ಆಯಾಕಾಲದಲ್ಲಿ ಹೇಗೆ ತಮ್ಮನ್ನು ತಾವು ಮರೆತು ದೈವದಲ್ಲಿ ಲೀನರಾದರು ಎಂಬುದನ್ನು ಅರಿತು ತಮ್ಮ ತಮ್ಮ ಜೀವನದಲ್ಲಿ ಹೇಗೆ ಅದನ್ನು ಉಪಯೋಗಿಸಿಕೊಂಡು ತಾವೂ ಭಕ್ತಿಸಾಮ್ರಾಜ್ಯದಲ್ಲಿ ಸುಖಿಸಬಹುದೆಂದು ಅರಿಯುತ್ತಾರೆ. ಸಾಧುಸಂತರ ಜೀವನ ಚರಿತ್ರೆ ಇಂತಹ ಆದರ್ಶಗಳ ಆಗರ.

ಅದ್ವೈತವು ಭಕ್ತನನ್ನು ಭಕ್ತಿಯತ್ತ ಕೊಂಡೊಯ್ದು ಅಂತಿಮದಲ್ಲಿ ತನ್ನ ಇಷ್ಟದೇವತೆಯ ಇರುವಿಕೆಯ ಅನುಭವ ಪಡೆದು ಕೊನೆಯಲ್ಲಿ ಅದರಲ್ಲಿಯೇ ಲೀನವಾಗುವಂತೆ ಮಾಡುತ್ತದೆ. ಅದೇ ಭಗವದ್ಭಕ್ತಿ . ಅಂತಹ ಭಗವದ್ಭಕ್ತಿ ಪ್ರಾಪ್ತವಾಗ ಬೇಕಾದರೆ ಭಕ್ತನು ಆರಾಧಿಸುವ ದೈವ ಹಿರಿದಾದ ಸರ್ವ ಗುಣ ಸಂಪನ್ನವಾಗಿರಬೇಕು. ದೇವಿಯು ಅಂತಹ ಸರ್ವ ಗುಣಗಳ ಆಗರ, ಮೊರೆ ಹೊಕ್ಕವರನ್ನು ಕಾಪಾಡುವ ಅದ್ಭುತ ಶಕ್ತಿ. ಎಂತಹ ಆಪತ್ತುಗಳನ್ನೂ ಹೋಗಲಾಡಿಸಬಲ್ಲ ಕರುಣಾಮಯಿ, ಆಪತ್ಕಾಲದಲ್ಲಿ ದೇವತೆಗಳನ್ನು ಕಾಪಾಡಿದ ದೇವಿಯು ಸರ್ವಶಕ್ತೆ, ಮಹಾಭಯಂಕರ ರಾಕ್ಷಸರನ್ನೇ ಮೂಲೋತ್ಪಾಟನೆ ಮಾಡಿದ ದೇವಿಗೆ ರಾಕ್ಷಸ ಗುಣದಿಂದ ರಾರಾಜಿಸುವ ಕ್ರೂರ ಶಕ್ತಿಗಳನ್ನು ದಮನ ಮಾಡಿ ತನ್ನ ಭಕ್ತರನ್ನು ಉದ್ದಸುವುದು ತನ್ನ ಕರ್ತವ್ಯವೆಂದು ಭಕ್ತರನ್ನು ಕಾಪಾಡುವ ಕರುಣಾಮಯಿ.

ಯಾರು ಹೇಗೆ ಮೊರೆ ಹೊಕ್ಕರೂ ಅವರ ಭಾವದಲ್ಲಿ ಕಾಪಾಡುವ ಮಹಾಶಕ್ತಿಯನ್ನು ಶರಣುಹೋಗಿ ನಮ್ಮನ್ನು ನಾವು ಉದ್ಧರಿಸಿಕೊಳ್ಳುವ ಸದ್ಬುದ್ಧಿಯನ್ನು ಅನುಗ್ರಹಿಸುವಂತೆ ಪ್ರಾರ್ಥಿಸೋಣ.

---

## ಶ್ರೀ ಗಾಯತ್ರೀ, ಶ್ರೀ ಲಲಿತಾಪಂಚದಶಾಕ್ಷರೀ, ಶ್ರೀ ಸಪ್ತಮಾತೃಕಾ

| ವೀಣೆಯ ಮನೆಗಳು | ೧ | ೨ | ೩ | ೪ | ೫ | ೬ | ೭ | ೮ | ೯ | ೧೦ | ೧೧ |
|---|---|---|---|---|---|---|---|---|---|---|---|
| ಸಪ್ತಮಾತೃಕಾಶಕ್ತಿ (ವೀಣೆಯ ಮನೆಗಳ ಸ್ವರಗಳು) | ರಿ | ರಿ ಗ | ರಿ ಗ | ಗ | ಮ | ಮ | ಪ | ಧ | ಧ ನಿ | ಧ ನಿ | ನಿ |
| ಶ್ರೀ ಗಾಯತ್ರೀಮಂತ್ರ | ಸ | ವಿ | ತುಃ | ವ | ರೇ | ಣಿ | ಯಾ | ಭ | ರ್ಗಃ | ದೇ | ವ |
| ಶ್ರೀಲಲಿತಾಪಂಚ ದಶಾಕ್ಷರೀ ಮಂತ್ರ | ಕ | ಏ | ಈ | ಲ ಹ್ರೀಂ | ಹ | ಸ | ಕ | ಹ | ಲ ಹ್ರೀಂ | ಸ | ಕ |
| ಶ್ರೀ ಲಲಿತಾ ಪಂಚ ದಶಾಕ್ಷರೀಮಂತ್ರದ ವಿವರಣೆ. ಶ್ರೀಶಂಕರಾಚಾರ್ಯ ರವರಿಂದ | ಶಿವಃ | ಶಕ್ತಿಃ | ಕಾಮಃ | ಕ್ಷಿತಿಃ | ರವಿಃ | ಶೀತಕಿರಣಃ | ಸ್ಮರಃ | ಹಂಸಃ | ಶಕ್ರಃ | ಪರಾ | ಮಾರ |
| ಮಂತ್ರಗಳ ತತ್ತ್ವಾರ್ಥ | ಸೃಷ್ಟಿ | | | ವ್ಯಾಪಾರ | | | | | | | |
| | ಅವರೋಹಣ | | | | | | | | | | |
| ಶ್ರೀ ಗಾಯತ್ರೀ ೨೪ ಅಕ್ಷರಗಳ ತತ್ತ್ವದಲ್ಲಿರುವ ಶ್ರೀಮದ್ರಾಮಾಯಣದ ಅಂತರಾರ್ಥಗಳಿಗೂ ಸಹ ಸಮನ್ವಯ | ಬಾಲಕಾಂಡದ ತತ್ತ್ವಗಳು | | | ಅಯೋಧ್ಯಾಕಾಂಡದ ತತ್ತ್ವಗಳು | | | ಅರಣ್ಯಕಾಂಡದ ತತ್ತ್ವಗಳು | | | | ಕಿಷ್ಕಿಂಧಾಕಾಂಡದ ತತ್ತ್ವಗಳು |

*ಯಡತೊರೆ ಸುಬ್ಬರಾಯ ಶರ್ಮ ಶ್ರೀ ಲಲಿತ ಸಹಸ್ರನಾಮದ ಭಾಷ್ಯ, ೧೯೪೯. ಪುಟ ೩೩೮ ಮತ್ತು ೩೩೯*

ಮತ್ತು ಶ್ರೀಮದ್ರಾಮಾಯಣ ಇವುಗಳ ಏಕತತ್ತ್ವಾರ್ಥದ ನಿರೂಪಣೆ

| ೧೨ | ೧೩ | ೧೪ | ೧೫ | ೧೬ | ೧೭ | ೧೮ | ೧೯ | ೨೦ | ೨೧ | ೨೨ | ೨೩ | ೨೪ |
|---|---|---|---|---|---|---|---|---|---|---|---|---|
| ಸ | ರಿ | ರಿ ಗ | ರಿ ಗ | ಗ | ಮ | ಮ | ಪ | ಧ | ಧ ನಿ | ಧ ನಿ | ನಿ | ಸ |
| ಸ್ಯ | ಧೀ | ಮ | ಹಿ | ಧಿ | ಯೋ | ಯೋ | ನಃ | ಪ್ರ | ಚೋ | ದ | ಯಾತ್ | ತತ್ |
| ಲ ಹ್ರೀಂ | ಕ | ಏ | ಈ | ಲ ಹ್ರೀಂ | ಹ | ಸ | ಕ | ಹ | ಲ ಹ್ರೀಂ | ಸ | ಕ | ಲ ಹ್ರೀಂ |
| ಹರಿಃ | ಶಿವಃ | ಶಕ್ತಿಃ | ಕಾಮಃ | ಕ್ಷಿತಿಃ | ರವಿಃ | ಶೀತಕಿರಣಃ | ಸ್ಮರಃ | ಹಂಸಃ | ಶಕ್ರಃ | ಪರಾ | ಮಾರ | ಹರಿಃ |
| ಮೋಕ್ಷಕ್ಕೆ ಹತ್ತುವುದು (ಲಯ) | | | | | | | | | | | | ಪರಬ್ರಹ್ಮ |
| ಆರೋಹಣ | | | | | | | | | | | | |
| ಸುಂದರಕಾಂಡದ ತತ್ತ್ವಗಳು | | ಯುದ್ಧಕಾಂಡದ ತತ್ತ್ವಗಳು | | | | | | | ಉತ್ತರಕಾಂಡದ ತತ್ತ್ವಗಳು | | | ಮಹಾವಿಷ್ಣು |

೨೪ ನೆಯ ಮನೆಯಲ್ಲಿರುವವುಗಳೆಲ್ಲಾ ಪರಬ್ರಹ್ಮಪ್ರತಿಪಾದಕವಾಗಿವೆ

ಅಧ್ಯಾಯ - ೧೧

## ದೇವೀ ಸ್ತೋತ್ರ - ೧

ತ್ವಂ ಸ್ವಾಹಾ ತ್ವಂ ಸ್ವಧಾ ತ್ವಂ ಹಿ ವಷಟ್ಕಾರಃ ಸ್ವರಾತ್ಮಿಕಾ |
ಸುಧಾ ತ್ವಮಕ್ಷರೇ ನಿತ್ಯೇ ತ್ರಿಧಾ ಮಾತ್ರಾತ್ಮಿಕಾ ಸ್ಥಿತಾ ||೧||

ಅರ್ಧಮಾತ್ರಾ ಸ್ಥಿತಾ ನಿತ್ಯಾ ಯಾನುಚ್ಚಾರ್ಯಾ ವಿಶೇಷತಃ |
ತ್ವಮೇವ ಸಂಧ್ಯಾ ಸಾವಿತ್ರೀ ತ್ವಂ ದೇವೀ ಜನನೀ ಪರಾ ||೨||

ತ್ವಯ್ಯೈತದ್ಧಾರ್ಯತೇ ವಿಶ್ವಂ ತ್ವಯ್ಯೈತತ್ ಸೃಜ್ಯತೇ ಜಗತ್ |
ತ್ವಯ್ಯೈತತ್ ಪಾಲ್ಯತೇ ದೇವಿ ತ್ವಮತ್ಸ್ಯಂತೇ ಚ ಸರ್ವದಾ ||೩||

ವಿಸೃಷ್ಟೌ ಸೃಷ್ಟಿರೂಪಾ ತ್ವಂ ಸ್ಥಿತಿರೂಪಾ ಚ ಪಾಲನೇ |
ತಥಾ ಸಂಹೃತಿರೂಪಾಂತೇ ಜಗತೋऽಸ್ಯ ಜಗನ್ಮಯೀ ||೪||

ಮಹಾವಿದ್ಯಾ ಮಹಾಮಾಯಾ ಮಹಾಮೇಧಾ ಮಹಾಸ್ಮೃತಿಃ |
ಮಹಾಮೋಹಾ ಗ ಭವತೀ ಮಹಾದೇವೀ ಮಹೇಶ್ವರೀ ||೫||

ಪ್ರಕೃತಿಸ್ತ್ವಂ ಚ ಸರ್ವಸ್ಯ ಗುಣತ್ರಯವಿಭಾವಿನೀ |
ಕಾಲರಾತ್ರಿರ್ಮಹಾರಾತ್ರಿರ್ಮೋಹರಾತ್ರಿಶ್ಚ ದಾರುಣಾ ||೬||

ತ್ವಂ ಶ್ರೀಸ್ತ್ವಮೀಶ್ವರೀ ತ್ವಂ ಹ್ರೀಸ್ತ್ವಂ ಬುದ್ಧಿರ್ಬೋಧಲಕ್ಷಣಾ |
ಲಜ್ಜಾಪುಷ್ಟಿಸ್ತಥಾ ತುಷ್ಟಿಸ್ತ್ವಂ ಶಾಂತಿಃ ಕ್ಷಾಂತಿರೇವ ಚ ||೭||

ಖಡ್ಗಿನೀ ಶೂಲಿನೀ ಘೋರಾ ಗದಿನೀ ಚಕ್ರಿಣೀ ತಥಾ |
ಶಂಖಿನೀ ಚಾಪಿನೀ ಬಾಣಭುಶುಂಡೀಪರಿಘಾಯುಧಾ ||೮||

ಸೌಮ್ಯಾ ಸೌಮ್ಯತರಾಶೇಷಸೌಮ್ಯೇಭ್ಯಸ್ತ್ವತಿಸುಂದರೀ |
ಪರಾಪರಾಣಾಂ ಪರಮಾ ತ್ವಮೇವ ಪರಮೇಶ್ವರೀ ||೯||

ಯಚ್ಚ ಕಿಂಚಿತ್ ಕ್ವಚಿದ್ವಸ್ತು ಸದಸದ್ವಾಖಿಲಾತ್ಮಿಕೇ |
ತಸ್ಯ ಸರ್ವಸ್ಯ ಯಾ ಶಕ್ತಿಃ ಸಾ ತ್ವಂ ಕಿಂ ಸ್ತೂಯಸೇ ಮಯಾ ||೧೦||

ಯಯಾ ತ್ವಯಾ ಜಗತ್ಸ್ರಷ್ಟಾ ಜಗತ್ಪಾತ್ಯತ್ತಿ ಯೋ ಜಗತ್ |
ಸೋऽಪಿ ನಿದ್ರಾವಶಂ ನೀತಃ ಕಸ್ತ್ವಾಂ ಸ್ತೋತುಮಿಹೇಶ್ವರಃ ||೧೧||

ವಿಷ್ಣುಃ ಶರೀರಗ್ರಹಣಮಹಾಮೀಶಾನ ಏವ ಚ |
ಕಾರಿತಾಸ್ತೇ ಯತೋऽತಸ್ತ್ವಾಂ ಕಃ ಸ್ತೋತುಂ ಶಕ್ತಿಮಾನ್ಭವೇತ್ ||೧೨||

ಸ್ತುತಾ ತ್ವಮಿತ್ಥಂ ಪ್ರಭಾವೈಃ ಸ್ವೈರುದಾರೈರ್ದೇವಿ ಸಂಸ್ತುತಾ |
ಮೋಹಯೈತೌ ದುರಾಧರ್ಷಾವಸುರೌ ಮಧುಕೈಟಭೌ ||೧೩||

ಪ್ರಬೋಧಂ ಚ ಜಗತ್ಸ್ವಾಮೀ ನೀಯತಾಮಚ್ಯುತೋ ಲಘು |
ಬೋಧಶ್ಚ ಕ್ರಿಯತಾಮಸ್ಯ ಹಂತುಮೇತೌ ಮಹಾಸುರೌ ||೧೪||

(ದೇವೀಮಾಹಾತ್ಮ್ಯದಿಂದ ಆರಿಸಿದ್ದು)

## ದೇವೀ ಸ್ತೋತ್ರ - ೨

ಶಕ್ರಾದಯಃ ಸುರಗಣಾ ನಿಹತೇऽತಿವೀರ್ಯೇ
ತಸ್ಮಿನ್ ದುರಾತ್ಮನಿ ಸುರಾರಿಬಲೇ ಚ ದೇವ್ಯಾ |
ತಾಂ ತುಷ್ಟುವುಃ ಪ್ರಣತಿನಮ್ರಶಿರೋಧರಾಂ ಸಾ
ವಾಗ್ಭಿಃ ಪ್ರಹರ್ಷಪುಲಕೋದ್ಗಮಚಾರುದೇಹಾಃ ||೧||

ದೇವ್ಯಾ ಯಯಾ ತತಮಿದಂ ಜಗದಾತ್ಮಶಕ್ತ್ಯಾ
ನಿಶ್ಶೇಷದೇವಗಣಶಕ್ತಿ ಸಮೂಹಮೂರ್ತ್ಯಾ |
ತಾಮಂಬಿಕಾಮಖಿಲ ದೇವ ಮಹರ್ಷಿ ಪೂಜ್ಯಾಂ
ಭಕ್ತ್ಯಾನತಾಃ ಸ್ಮ ವಿದಧಾತು ಶುಭಾನಿ ಸಾ ನಃ | ||೨||

ಯಸ್ಯಾಃ ಪ್ರಭಾವಮತುಲಂ ಭಗವಾನನಂತೋ
ಬ್ರಹ್ಮಾ ಹರಶ್ಚ ನ ಹಿ ವಕ್ತುಮಲಂ ಬಲಂ ಚ |
ಸಾ ಚಂಡಿಕಾಖಿಲಜಗತ್ಪರಿಪಾಲನಾಯ
ನಾಶಾಯ ಚಾಸುರಭಯಸ್ಯ ಮತಿಂ ಕರೋತು ||೩||

ಯಾ ಶ್ರೀಃ ಸ್ವಯಂ ಸುಕೃತಿನಾಂ ಭವನೇಷುಲಕ್ಷ್ಮೀಃ
ಪಾಪಾತ್ಮನಾಂ ಕೃತಧಿಯಾಂ ಹೃದಯೇಷು ಬುದ್ಧಿಃ |
ಶ್ರದ್ಧಾ ಸತಾಂ ಕುಲಜನಪ್ರಭವಸ್ಯ ಲಜ್ಜಾ
ತಾಂ ತ್ವಾಂ ನತಾಃ ಸ್ಮ ಪರಿಪಾಲಯ ದೇವಿ ವಿಶ್ವಮ್ | ||೪||

ಕಿಂ ವರ್ಣಯಾಮ ತವ ರೂಪಮಚಿಂತ್ಯಮೇತತ್
ಕಿಂ ಚಾತಿವೀರ್ಯಮಸುರಕ್ಷಯಕಾರಿ ಭೂರಿ |
ಕಿಂ ಚಾಹವೇಷು ಚರಿತಾನಿ ತವಾದ್ಭುತಾನಿ
ಸರ್ವೇಷು ದೇವ್ಯಸುರಗಣಾದಿಕೇಷು | ||೫||

ಹೇತುಃ ಸಮಸ್ತಜಗತಾಂ ತ್ರಿಗುಣಾಪಿ ದೇವ್ಯೈಃ
ನ ಜ್ಞಾಯಸೇ ಹರಿಹರಾದಿಭಿರಪ್ಯಪಾರಾ |
ಸರ್ವಾಶ್ರಯಾಖಿಲಮಿದಂ ಜಗದಂಶಭೂತ-
ಮವ್ಯಾಕೃತಾ ಹಿ ಪರಮಾ ಪ್ರಕೃತಿಸ್ತ್ವಮಾದ್ಯಾ | ||೬||

ಯಸ್ಯಾಃ ಸಮಸ್ತಸುರತಾ ಸಮುದೀರಣೇನ
ತೃಪ್ತಿಂ ಪ್ರಯಾತಿ ಸಕಲೇಷು ಮಖೇಷು ದೇವಿ |
ಸ್ವಾಹಾಸಿ ವೈ ಪಿತೃಗಣಸ್ಯ ಚ ತೃಪ್ತಿಹೇತು -
ರುಚ್ಚಾರ್ಯಸೇ ತ್ವಮತ ಏವ ಜನ್ಯೈಃ ಸ್ವಧಾ ಚ ||೭||

ಯಾ ಮುಕ್ತಿಹೇತುರವಿಚಿಂತ್ಯ ಮಹಾವ್ರತೈ ಸ್ತ್ವಮ್
ಅಭ್ಯಸ್ಯಸೇ ಸುನಿಯತೇಂದ್ರಿಯತತ್ತ್ವಸಾರೈಃ |
ಮೋಕ್ಷಾರ್ಥಿಭಿರ್ಮುನಿಭಿರಸ್ತಸಮಸ್ತದೋಷೈ -
ರ್ವಿದ್ಯಾಸಿ ಸಾ ಭಗವತೀ ಪರಮಾ ಹಿ ದೇವಿ ||೮||

ಶಬ್ದಾತ್ಮಿಕಾ ಸುವಿಮಲರ್ಗ್ಯಜುಷಾಂ ನಿಧಾನಮ್
ಉದ್ಗೀಥರಮ್ಯಪದಪಾಠವತಾಂ ಚ ಸಾಮ್ನಾಮ್ |
ದೇವೀ ತ್ರಯೀ ಭಗವತೀ ಭವಭಾವನಾಯ
ವಾರ್ತಾ ಚ ಸರ್ವಜಗತಾಂ ಪರಮಾರ್ತಿಹಂತ್ರೀ | ||೯||

ಮೇಧಾಸಿ ದೇವಿ ವಿದಿತಾಖಿಲಶಾಸ್ತ್ರಸಾರಾ
ದುರ್ಗಾಸಿ ದುರ್ಗಭವಸಾಗರನೌರಸಂಗಾ |
ಶ್ರೀಃ ಕೈಟಭಾರಿಹೃದಯೈಕಕೃತಾಧಿವಾಸಾ
ಗೌರೀ ತ್ವಮೇವ ಶಶಿಮೌಳಿಕೃತಪ್ರತಿಷ್ಠಾ ||೧೦||

ಈಷತ್ಸಹಾಸಮಮಲಂ ಪರಿಪೂರ್ಣಚಂದ್ರ-
ಬಿಂಬಾನುಕಾರಿಕನಕೋತ್ತಮಕಾಂತಿಕಾಂತಮ್
ಅತ್ಯದ್ಭುತಮ್ ಪ್ರಹೃತಮಾತ್ತರುಷಾ ತಥಾಪಿ
ವಕ್ತ್ರಂ ವಿಲೋಕ್ಯ ಸಹಸಾ ಮಹಿಷಾಸುರೇಣ | ||೧೧||

ದೃಷ್ಟ್ವಾತು ದೇವಿ ಕುಪಿತಂ ಭ್ರುಕುಟೀಕರಾಲಮ್
ಉದ್ಯಚ್ಛಶಾಂಕಸದೃಶಚ್ಛವಿಯನ್ನ ಸದ್ಯಃ |
ಪ್ರಾಣಾನ್ಮುಮೋಚ ಮಹಿಷಸ್ತದತೀವ ಚಿತ್ರಂ
ಕೈರ್ಜೀವ್ಯತೇ ಹಿ ಕುಪಿತಾಂತಕದರ್ಶನೇನ | ||೧೨||

ದೇವಿ ಪ್ರಸೀದ ಪರಮಾ ಭವತೀ ಭವಾಯ
ಸದ್ಯೋ ವಿನಾಶಯಸಿ ಕೋಪವತೀ ಕುಲಾನಿ |
ವಿಜ್ಞಾತಮೇತದಧುನೈವ ಯದಸ್ತಮೇತ
ನ್ನೀತಂ ಬಲಂ ಸುವಿಪುಲಂ ಮಹಿಷಾಸುರಸ್ಯ | ||೧೩||

ತೇ ಸಂಮತಾ ಜನಪದೇಷು ಧನಾನಿ ತೇಷಾಂ
ತೇಷಾಂ ಯಶಾಂಸಿ ನ ಚ ಸೀದತಿ ಧರ್ಮವರ್ಗಃ |
ಧನ್ಯಾಸ್ತ ಏವ ನಿಭೃತಾತ್ಮಜಭೃತ್ಯದಾರಾ
ಯೇಷಾಂ ಸದಾಭ್ಯುದಯದಾ ಭವತೀ ಪ್ರಸನ್ನಾ || ||೧೪||

ಧರ್ಮ್ಯಾಣಿ ದೇವಿ ಸಕಲಾನಿ ಸದೈವ ಕರ್ಮಾ-
ಣ್ಯತ್ಯಾದೃತಃ ಪ್ರತಿದಿನಂ ಸುಕೃತೀಕರೋತಿ |
ಸ್ವರ್ಗಂ ಪ್ರಯಾತಿ ಚ ತತೋ ಭವತಿ ಪ್ರಸಾದಾ-
ಲ್ಲೋಕತ್ರಯೇಽಪಿ ಫಲದಾ ನನು ದೇವಿ ತೇನ || ||೧೫||

ದುರ್ಗೇ ಸ್ಮೃತಾ ಹರಸಿ ಭೀತಿಮಶೇಷಜಂತೋಃ
ಸ್ವಸ್ಥೈಃ ಸ್ಮೃತಾ ಮತಿಮತೀವ ಶುಭಾಂ ದದಾಸಿ |
ದಾರಿದ್ರ್ಯದುಃಖಭಯಹಾರಿಣಿ ಕಾ ತ್ವದನ್ಯಾ
ಸರ್ವೋಪಕಾರಕರಣಾಯ ಸದಾರ್ದ್ರಚಿತ್ತಾ || ||೧೬||

ಏಭಿರ್ಹತೈರ್ಜಗದುಪೈತಿ ಸುಖಂ ತಥೈತೇ
ಕುರ್ವಂತು ನಾಮ ನರಕಾಯ ಚಿರಾಯ ಪಾಪಮ್ ||
ಸಂಗ್ರಾಮಮೃತ್ಯುಮಧಿಗಮ್ಯ ದಿವಂ ಪ್ರಯಾಂತು
ಮತ್ವೇತಿ ನೂನಮಹಿತಾನ್ ವಿನಿಹಂಸಿ ದೇವಿ || ||೧೭||

ದೃಷ್ಟ್ವೈವ ಕಿಂ ನ ಭವತೀ ಪ್ರಕರೋತಿ ಭಸ್ಮ
ಸರ್ವಾಸುರಾನರಿಷು ಯತ್ಪ್ರಹಿಣೋಷಿ ಶಸ್ತ್ರಮ್ |
ಲೋಕಾನ್ಪ್ರಯಾಂತು ರಿಪವೋಽಪಿ ಹಿ ಶಸ್ತ್ರಪೂತಾ
ಇತ್ಥಂ ಮತಿರ್ಭವತಿ ತೇಷ್ವಪಿ ತೇಽಪಿ ಸಾಧ್ವೀ || ||೧೮||

ಖಡ್ಗಪ್ರಭಾನಿಕರವಿಸ್ಫುರಣೈಸ್ತಥೋಗ್ರೈಃ
ಶೂಲಾಗ್ರಕಾಂತಿನಿವಹೇನ ದೃಶೋಽಸುರಾಣಾಮ್ |
ಯನ್ನಾಗತಾ ವಿಲಯಮಂಶುಮದಿಂದುಖಂಡ-
ಯೋಗ್ಯಾನನಂ ತವ ವಿಲೋಕಯತಾಂ ತದೇತತ್ || ||೧೯||

ದುರ್ವೃತ್ತವೃತ್ತಶಮನಂ ತವ ದೇವಿ ಶೀಲಂ
ರೂಪಂ ತಥೈತದವಿಚಿಂತ್ಯಮತುಲ್ಯಮನ್ಯೈಃ |
ವೀರ್ಯಂ ಚ ಹಂತೃ ಹೃತದೇವ ಪರಾಕ್ರಮಾಣಾಂ
ವೈರಿಷ್ವಪಿ ಪ್ರಕಟಿತೈವ ದಯಾ ತ್ವಯೇತ್ಥಮ್ || ||೨೦||

ಕೇನೋಪಮಾ ಭವತು ತೇಽಸ್ಯ ಪರಾಕ್ರಮಸ್ಯ
ರೂಪಂ ಚ ಶತ್ರುಭಯ ಕಾರ್ಯತಿಹಾರಿ ಕುತ್ರ |
ಚಿತ್ತೇ ಕೃಪಾ ಸಮರನಿಷ್ಠುರತಾ ಚ ದೃಷ್ಟಾ
ತ್ವಯ್ಯೇವ ದೇವಿ ವರದೇ ಭುವನತ್ರಯೇಽಪಿ || ||೨೧||

ತ್ರೈಲೋಕ್ಯಮೇತದಖಿಲಂ ರಿಪುನಾಶನೇನ
ತ್ರಾತಂ ತ್ವಯಾ ಸಮರಮೂರ್ಧನಿ ತೇಽಪಿ ಹತ್ವಾ |
ನೀತಾ ದಿವಂ ರಿಪುಗಣಾ ಭಯಮಪ್ಯಪಾಸ್ತಮ್ |
ಅಸ್ಮಾಕಮುನ್ಮದಸುರಾರಿಭವಂನಮಸ್ತೇ || ||೨೨||

ಶೂಲೇನ ಪಾಹಿ ನೋ ದೇವಿ ಪಾಹಿ ಖಡ್ಗೇನ ಚಾಂಬಿಕೇ |
ಘಂಟಾಸ್ವನೇನ ನಃ ಪಾಹಿ ಚಾಪಜ್ಯಾನಿಃಸ್ವನೇನ ಚ || ||೨೩||

ಪ್ರಾಚ್ಯಾಂ ರಕ್ಷ ಪ್ರತೀಚ್ಯಾಂ ಚ ಚಂಡಿಕೇ ರಕ್ಷ ದಕ್ಷಿಣೇ |
ಭ್ರಾಮಣೇನಾತ್ಮಶೂಲಸ್ಯ ಉತ್ತರಸ್ಯಾಂ ತಥೇಶ್ವರಿ || ||೨೪||

ಸೌಮ್ಯಾನಿ ಯಾನಿ ರೂಪಾಣಿ ತ್ರೈಲೋಕ್ಯೇ ವಿಚರಂತಿ ತೇ |
ಯಾನಿ ಚಾತ್ಯರ್ಥಘೋರಾಣಿ ತೈ ರಕ್ಷಾಸ್ಮಾಂಸ್ತಥಾ ಭುವಮ್ || ||೨೫||

ಖಡ್ಗಶೂಲಗದಾದೀನಿ ಯಾನಿ ಚಾಸ್ತ್ರಾಣಿ ತೇಽಂಬಿಕೇ |
ಕರಪಲ್ಲವಸಂಗೀನಿ ತೈರಸ್ಮಾನ್ ರಕ್ಷ ಸರ್ವತಃ ||೨೬||

(ದೇವೀಮಾಹಾತ್ಮ್ಯದಿಂದ ಆರಿಸಿದ್ದು)

## ನಾರಾಯಣೀ ಸ್ತೋತ್ರ
## ಶ್ರೀಸಪ್ತಮಾತೃಕಾ ಸ್ತೋತ್ರ

ದೇವ್ಯಾ ಹತೇ ತತ್ರ ಮಹಾಽಸುರೇಂದ್ರೇ
ಸೇಂದ್ರಾಸ್ಸುರಾ ವಹ್ನಿ ಪುರೋಗಮಸ್ತಾಮ್ |
ಕಾತ್ಯಾಯನೀಂ ತುಷ್ಟುವುರಿಷ್ಟಲಾಭಾದ್
ವಿಕಾಸಿವಕ್ತ್ರಾಬ್ಜವಿಕಾಸಿತಾಶಾಃ || ||೧||

ದೇವಿ ಪ್ರಪನ್ನಾರ್ತಿಹರೇ ಪ್ರಸೀದ
ಪ್ರಸೀದ ಮಾತರ್ಜಗತೋಽಖಿಲಸ್ಯ |
ಪ್ರಸೀದ ವಿಶ್ವೇಶ್ವರಿ ಪಾಹಿ ವಿಶ್ವಂ
ತ್ವಮೀಶ್ವರೀ ದೇವಿ ಚರಾಚರಸ್ಯ || ||೨||

ಆಧಾರಭೂತಾ ಜಗತಸ್ತ್ವಮೇಕಾ
ಮಹೀಸ್ವರೂಪೇಣ ಯತಃ ಸ್ಥಿತಾಸಿ |
ಅಪಾಂ ಸ್ವರೂಪಸ್ಥಿತಯಾ ತ್ವಯೈತದ್
ಆಪ್ಯಾಯತೇ ಕೃತ್ಸ್ನಮಲಂಘ್ಯವೀರ್ಯೇ || ||೩||

ತ್ವಂ ವೈಷ್ಣವೀಶಕ್ತಿರನಂತವೀರ್ಯಾ
ವಿಶ್ವಸ್ಯ ಬೀಜಂ ಪರಮಾಸಿ ಮಾಯಾ |
ಸಂಮೋಹಿತಂ ದೇವಿ ಸಮಸ್ತಮೇತತ್
ತ್ವಂ ವೈ ಪ್ರಸನ್ನಾ ಭುವಿ ಮುಕ್ತಿಹೇತುಃ || ||೪||

ವಿದ್ಯಾಸ್ಸಮಸ್ತಾಸ್ತವ ದೇವಿ ಭೇದಾಃ
ಸ್ತ್ರಿಯಸ್ಸಮಸ್ತಾಸ್ಸಕಲಾ ಜಗತ್ಸು |
ತ್ವಯೈಕಯಾ ಪೂರಿತಮಂಬಸರ್ವಂ
ಕಾ ತೇ ಸ್ತುತಿಸ್ಸ್ತವ್ಯಪರಾಪರೋಕ್ತಿಃ || ||೫||

ಸರ್ವಭೂತಾ ಯದಾ ದೇವೀ ಭುಕ್ತಿಮುಕ್ತಿಪ್ರದಾಯಿನೀ |
ತ್ವಂ ಸ್ತುತಾ ಸ್ತುತಯೇ ಕಾ ವಾ ಭವಂತಿ ಪರಮೋಕ್ತಯಃ || ||೬||

ಸರ್ವಸ್ಯ ಬುದ್ಧಿರೂಪೇಣ ಜನಸ್ಯ ಹೃದಿ ಸಂಸ್ಥಿತೇ |
ಸ್ವರ್ಗಾಪವರ್ಗದೇ ದೇವಿ ನಾರಾಯಣಿ ನಮೋಽಸ್ತು ತೇ ||೭||

ಕಲಾಕಾಷ್ಠಾದಿರೂಪೇಣ ಪರಿಣಾಮಪ್ರದಾಯಿನೀ |

ವಿಶ್ವಸ್ಯೋಪರತೌ ಶಕ್ತೇ ನಾರಾಯಣಿ ನಮೋಽಸ್ತು ತೇ | ||೮||
ಸರ್ವಮಂಗಲಮಾಂಗಲ್ಯೇ ಶಿವೇ ಸರ್ವಾರ್ಥಸಾಧಿಕೇ |
ಶರಣ್ಯೇತ್ರ್ಯಂಬಕೇ ದೇವಿ ನಾರಾಯಣಿ ನಮೋಽಸ್ತು ತೇ | ||೯||
ಸೃಷ್ಟಿಸ್ಥಿತಿ ವಿನಾಶಾನಾಂ ಶಕ್ತಿಭೂತೇ ಸನಾತನಿ |
ಗುಣಾಶ್ರಯೇ ಗುಣಮಯೇ ನಾರಾಯಣಿ ನಮೋಽಸ್ತು ತೇ || ||೧೦||
ಶರಣಾಗತದೀನಾರ್ತಪರಿತ್ರಾಣಪರಾಯಣೇ |
ಸರ್ವಸ್ಯಾರ್ತಿಹರೇ ದೇವಿ ನಾರಾಯಣಿ ನಮೋಽಸ್ತು ತೇ || ||೧೧||
ಹಂಸಯುಕ್ತವಿಮಾನಸ್ಥೇ ಬ್ರಹ್ಮಾಣೀ ರೂಪಧಾರಿಣಿ |
ಕೌಶಾಂಭಃಕ್ಷರಿಕೇ ದೇವಿ ನಾರಾಯಣಿ ನಮೋಽಸ್ತು ತೇ || ||೧೨||
ತ್ರಿಶೂಲಚಂದ್ರಾಹಿಧರೇ ಮಹಾವೃಷಭವಾಹಿನಿ |
ಮಾಹೇಶ್ವರೀ ಸ್ವರೂಪೇಣ ನಾರಾಯಣಿ ನಮೋಽಸ್ತು ತೇ || ||೧೩||
ಮಯೂರಕುಕ್ಕುಟವೃತೇ ಮಹಾಶಕ್ತಿಧರೇಽನಘೇ |
ಕೌಮಾರೀ ರೂಪಸಂಸ್ಥಾನೇ ನಾರಾಯಣಿ ನಮೋಽಸ್ತು ತೇ || ||೧೪||
ಶಂಖಚಕ್ರಗದಾಶಾರ್ಙ್ಗಗೃಹೀತಪರಮಾಯುಧೇ |
ಪ್ರಸೀದ ವೈಷ್ಣವೀ ರೂಪೇ ನಾರಾಯಣಿ ನಮೋಽಸ್ತು ತೇ || ||೧೫||
ಗೃಹೀತೋಗ್ರಮಹಾಚಕ್ರೇ ದಂಷ್ಟ್ರೋದ್ಧೃತವಸುಂಧರೇ |
ವರಾಹರೂಪಿಣಿ ಶಿವೇ ನಾರಾಯಣಿ ನಮೋಽಸ್ತು ತೇ || ||೧೬||
ನೃಸಿಂಹರೂಪೇಣೋಗ್ರೇಣ ಹಂತು ದೈತ್ಯಾನ್ ಕೃತೋದ್ಯಮೇ |
ತ್ರೈಲೋಕ್ಯತ್ರಾಣಸಹಿತೇ ನಾರಾಯಣಿ ನಮೋಽಸ್ತು ತೇ || ||೧೭||
ಕಿರೀಟಿನಿ ಮಹಾವಜ್ರೇ ಸಹಸ್ರನಯನೋಜ್ಜ್ವಲೇ |
ವೃತಪ್ರಾಣಹರೇ ಚೈಂದ್ರಿ ನಾರಾಯಣಿ ನಮೋಽಸ್ತು ತೇ || ||೧೮||
ಶಿವದೂತೀಸ್ವರೂಪೇಣ ಹತದೈತ್ಯಮಹಾಬಲೇ |
ಘೋರರೂಪೇ ಮಹಾರಾವೇ ನಾರಾಯಣಿ ನಮೋಽಸ್ತು ತೇ || ||೧೯||
ದಂಷ್ಟ್ರಾಕರಾಲವದನೇ ಶಿರೋಮಾಲಾವಿಭೂಷಣೇ |
ಚಾಮುಂಡೇ ಮುಂಡಮಥನೇ ನಾರಾಯಣಿ ನಮೋಽಸ್ತು ತೇ || ||೨೦||
ಲಕ್ಷ್ಮೀ ಲಜ್ಜೇ ಮಹಾವಿದ್ಯೇ ಶ್ರದ್ಧೇ ಪುಷ್ಟಿ ಸ್ವಧೇ ಧ್ರುವೇ |
ಮಹಾರಾತ್ರೀ ಮಹಾಮಾಯೇ ನಾರಾಯಣಿ ನಮೋಽಸ್ತು ತೇ || ||೨೧||
ಮೇಧೇ ಸರಸ್ವತಿವರೇ ಭೂತಿ ಬಾಭ್ರವಿ ತಾಮಸಿ |
ನಿಯತೇ ತ್ವಂ ಪ್ರಸೀದೇಶೇ ನಾರಾಯಣಿ ನಮೋಽಸ್ತು ತೇ || ||೨೨||

ಸರ್ವಸ್ವರೂಪೇ ಸರ್ವೇಶೇ ಸರ್ವಶಕ್ತಿಸಮನ್ವಿತೇ |
ಭಯೇಭ್ಯಸ್ತ್ರಾಹಿ ನೋ ದೇವಿ ದುರ್ಗೇ ದೇವಿ ನಮೋಽಸ್ತು ತೇ || ||೨೩||

ಏತತ್ತೇ ವದನಂ ಸೌಮ್ಯಂ ಲೋಚನತ್ರಯಭೂಷಿತಮ್ |
ಪಾತು ನಃ ಸರ್ವಭೀತಿಭ್ಯಃ ಕಾತ್ಯಾಯನಿ ನಮೋಽಸ್ತು ತೇ || ||೨೪||

ಜ್ವಾಲಾಕರಾಲಮತ್ಯುಗ್ರಮಶೇಷಾಸುರಸೂದನಮ್ |
ತ್ರಿಶೂಲಂ ಪಾತು ನೋ ಭೀತೇರ್ಭದ್ರಕಾಲಿ ನಮೋಽಸ್ತು ತೇ || ||೨೫||

ಹಿನಸ್ತಿ ದೈತ್ಯತೇಜಾಂಸಿ ಸ್ವನೇನಾಪೂರ್ಯ ಯಾ ಜಗತ್ |
ಸಾ ಘಂಟಾ ಪಾತು ನೋ ದೇವಿ ಪಾಪೇಭ್ಯೋ ನಃ ಸುತಾನಿವ || ||೨೬||

ಅಸುರಾಸೃಗ್ವಸಾಪಂಕಚರ್ಚಿತಸ್ತೇ ಕರೋಜ್ಜ್ವಲಃ |
ಶುಭಾಯ ಖಡ್ಗೋ ಭವತು ಚಂಡಿಕೇ ತ್ವಾಂ ನತಾ ವಯಮ್ || ||೨೭||

ರೋಗಾನಶೇಷಾನಪಹಂಸಿ ತುಷ್ಟಾ
ರುಷ್ಟಾ ತು ಕಾಮಾನ್ ಸಕಲಾನಭೀಷ್ಟಾನ್ |
ತ್ವಾಮಾಶ್ರಿತಾನಾಂ ನ ವಿಪನ್ನರಾಣಾಂ
ತ್ವಾಮಾಶ್ರಿತಾ ಹ್ಯಾಶ್ರಯತಾಂ ಪ್ರಯಾಂತಿ || ||೨೮||

ಏತತ್ಕೃತಂ ಯತ್ಕದನಂ ತ್ವಯಾದ್ಯ |
ಧರ್ಮದ್ವಿಷಾಂ ದೇವಿ ಮಹಾಸುರಾಣಾಮ್ |
ರೂಪೇರನೇಕೈರ್ಬಹುಧಾತ್ಮಮೂರ್ತಿಂ
ಕೃತ್ವಾಂಬಿಕೇ ತತ್ ಪ್ರಕರೋತಿ ಕಾನ್ಯಾ || ||೨೯||

ವಿದ್ಯಾಸು ಶಾಸ್ತ್ರೇಷು ವಿವೇಕದೀಪೇ -
ಷ್ವಾದ್ಯೇಷು ವಾಕ್ಯೇಷು ಚ ಕಾ ತ್ವದನ್ಯಾ |
ಮಮತ್ವಗರ್ತೇಽತಿಮಹಾಂಧಕಾರೇ
ವಿಭ್ರಾಮಯತ್ಯೇತದತೀವ ವಿಶ್ವಮ್ || ||೩೦||

ರಕ್ಷಾಂಸಿ ಯತ್ರೋಗ್ರವಿಷಾಶ್ಚ ನಾಗಾ
ಯತ್ರಾರಯೋ ದಸ್ಯುಬಲಾನಿ ಯತ್ರ |
ದಾವಾನಲೋ ಯತ್ರ ತಥಾಬ್ಧಿಮಧ್ಯೇ
ತತ್ರ ಸ್ಥಿತಾ ತ್ವಂ ಪರಿಪಾಸಿ ವಿಶ್ವಮ್ || ||೩೧||
ವಿಶ್ವೇಶ್ವರಿ ತ್ವಂ ಪರಿಪಾಸಿ ವಿಶ್ವಮ್
ವಿಶ್ವಾತ್ಮಿಕಾ ಧಾರಯಸೀಹ ವಿಶ್ವಮ್ |

ವಿಶ್ವೇಶವಂದ್ಯಾ ಭವತೀ ಭವಂತಿ
ವಿಶ್ವಾಶ್ರಯಾ ಯೇ ತ್ವಯಿ ಭಕ್ತಿನಮ್ರಾಃ ॥ ||೩೨||

ದೇವಿ ಪ್ರಸೀದ ಪರಿಪಾಲಯ ನೋಽಭೀತೇ-
ರ್ನಿತ್ಯಂ ಯಥಾಸುರವಧಾದಧುನೈವ ಸದ್ಯಃ ।
ಪಾಪಾನಿ ಸರ್ವಜಗತಾಂ ಪ್ರಶಮಂ ನಯಾಶು
ಉತ್ಪಾತಪಾಕ ಜನಿತಾಂಶ್ಚ ಮಹೋಪಸರ್ಗಾನ್ ॥ ||೩೩||

ಪ್ರಣತಾನಾಂ ಪ್ರಸೀದ ತ್ವಂ ದೇವಿ ವಿಶ್ವಾರ್ತಿಹಾರಿಣಿ ।
ತ್ರೈಲೋಕ್ಯವಾಸಿನಾಮೀಡ್ಯೇ ಲೋಕಾನಾಂ ವರದಾ ಭವ ॥ ||೩೪||

**(ದೇವೀ ಮಾಹಾತ್ಮ್ಯೆಯಿಂದ ಆರಿಸಿದ್ದು)**



ಅಧ್ಯಾಯ ೧೨

ಶ್ರೀಶಂಕರಾಚಾರ್ಯವಿರಚಿತ

## ಅಥ ದೇವ್ಯಪರಾಧ ಕ್ಷಮಾಪಣಸ್ತೋತ್ರಮ್

**ನ ಮಂತ್ರಂ ನೋ ಯಂತ್ರಂ ತದಪಿ ಚ ನ ಜಾನೇ ಸ್ತುತಿಮಹೋ**
**ನ ಚಾಹ್ವಾನಂ ಧ್ಯಾನಂ ತದಪಿ ಚ ನ ಜಾನೇ ಸ್ತುತಿಕಥಾಃ |**
**ನ ಜಾನೇ ಮುದ್ರಾಸ್ತೇ ತದಪಿ ಚ ನ ಜಾನೇ ವಿಲಪನಂ**
**ಪರಂ ಜಾನೇ ಮಾತಸ್ತ್ವದನುಸರಣಂ ಕ್ಲೇಶಹರಣಮ್ || ||೧||**

ದೇವಿ, ನನಗೆ ಮಂತ್ರವೆಂಬುದೇನೋ ಒಂದೂ ಅರಿಯದು, ಯಂತ್ರವೇನೆಂದು ನಾನು ಅರಿಯೆನು, ನಿನ್ನನ್ನು ಸುಂದರ ಶಬ್ದಗಳಿಂದ ಸ್ತುತಿಸುವುದನ್ನೂ ನಾನು ಅರಿಯೆನು, ಆವಾಹನ ಮಾಡುವುದಾಗಲೀ, ಧ್ಯಾನ ಮಾಡುವುದನ್ನಾಗಲೀ ನಾನು ಅರಿಯೆನು, ಸ್ತೋತ್ರ ಅಥವ ಕಥೆಯನ್ನೂ ನಾನು ಅರಿಯೆನು. ನಿನ್ನ ಮುದ್ರೆಯನ್ನು ಅರಿಯುವ ಜ್ಞಾನವೂ ನನಗಿಲ್ಲ, ನಿನ್ನ ವಿರಹದಿಂದ ವ್ಯಾಕುಲಗೊಳ್ಳುವುದನ್ನೂ ನಾನು ಅರಿಯೆನು. ಆದರೆ ದೇವೀ ಒಂದೇ ಒಂದನ್ನು ನಾನು ಅರಿತಿದ್ದೇನೆ. ಕೇವಲ ನಿನ್ನನ್ನು ಅನುಸರಿಸುವುದು - ಏಕೆಂದರೆ ಅದರಿಂದ ಸಕಲ ಕ್ಲೇಷ, ದುಃಖ, ನೋವುಗಳು ಎಲ್ಲವೂ ಇಲ್ಲದಂತಾಗುವುದು.

**ವಿಧೇರಜ್ಞಾನೇನ ದ್ರವಿಣವಿರಹೇಣಾಲಸತಯಾ**
**ವಿಧೇಯಾಶಕ್ಯತ್ವಾತ್ತವ ಚರಣಯೋರ್ಯಾ ಚ್ಯುತಿರಭೂತ್ |**
**ತದೇತತ್ ಕ್ಷಂತವ್ಯಮ್ ಜನನಿ ಸಕಲೋದ್ಧಾರಿಣಿ ಶಿವೇ**
**ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ || ||೨||**

ಸರ್ವರ ಉದ್ಧಾರಮಾಡುವ ಹೇ ಕಲ್ಯಾಣಮಯಿ, ನಾನು ಪೂಜೆ ಮಾಡುವ ವಿಧಿಗಳನ್ನೂ, ಅರಿಯೆನು. ನನ್ನ ಬಳಿ ಧನವೂ ಇಲ್ಲ ನನ್ನ ಸ್ವಭಾವವೂ ಸಹ ಆಲಸ್ಯದಿಂದಿರುವುದೇ ಆಗಿದೆ. ನನ್ನಿಂದ ಸರಿಯಾಗಿ ನಿನ್ನ ಪೂಜೆ ಮಾಡುವುದೂ ಸಹ ಬರುವುದಿಲ್ಲ. ಇದರಿಂದ ನಿನ್ನ ಪಾದವನ್ನು ನಂಬಿ ನಿನ್ನ ಸೇವೆಮಾಡಲು ಬಂದಿರುವೆನು ಯಾರಾದರೂ ಕುಪುತ್ರನಾಗಬಹುದು ಆದರೆ ಕೆಟ್ಟ ತಾಯಿ ಆಗುವುದಿಲ್ಲ. ನೀನು ಮಹಾ ತಾಯಿಯಾದುದರಿಂದ ನಿನಗೆ ತಕ್ಕ ಮಕ್ಕಳನ್ನಾಗಿ ನಮ್ಮನ್ನು ಮಾಡು.

**ಪೃಥಿವ್ಯಾಂ ಪುತ್ರಾಸ್ತೇ ಜನನಿ ಬಹವಃ ಸಂತಿ ಸರಲಾಃ**
**ಪರಂ ತೇಷಾಂ ಮಧ್ಯೇ ವಿರಲತರಲೋಽಹಮ್ ತವ ಸುತಃ |**
**ಮದೀಯೋಽಯಂ ತ್ಯಾಗಃ ಸಮುಚಿತಮಿದಂ ನೋ ತವ ಶಿವೇ**
**ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನಭವತಿ || ||೩||**

ಹೇ ತಾಯಿ, ಈ ಭೂಮಂಡಲದಲ್ಲಿ ನಿನ್ನ ಹಲವಾರು ಪುತ್ರರಿರುತ್ತಾರೆ. ಇವರೆಲ್ಲರಲ್ಲಿ ನಾನೂ ಒಬ್ಬ ಅತ್ಯಂತ ಚಪಲನಾದ ಮಗನಾಗಿದ್ದೇನೆ. ನನ್ನಂತಹ ಚಪಲನಾದ ಮಗನು ವಿರಳನಲ್ಲವೇ ? ಹೇ ಶಿವೆ, ನನ್ನ ಈ ತ್ಯಾಗ ಸರಿಯಾದುದಲ್ಲ. ಏಕೆಂದರೆ ಕುಪುತ್ರರಾಗುವವರು ಬಹಳ ಜನರಿದ್ದಾರೆ ಆದರೆ ಕೆಟ್ಟ ತಾಯಿಯಾಗುವವರು ಯಾರೂ ಇಲ್ಲ ಅಲ್ಲವೇ ?

**ಜಗನ್ಮಾತರ್ಮಾತಸ್ತವ ಚರಣಸೇವಾ ನ ರಚಿತಾ**
**ನ ವಾ ದತ್ತಂ ದೇವಿ ದ್ರವಿಣಮಪಿ ಭೂಯಸ್ತವ ಮಯಾ |**
**ತಥಾಪಿ ತ್ವಂ ಸ್ನೇಹಂ ಮಯಿ ನಿರುಪಮಂ ಯತ್ಪ್ರಕುರುಷೇ**
**ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ ||** ||೪||

ಹೇ ಜಗದಂಬೆ, ಹೇ ಮಾತೆ, ನಾನು ಯಾವಾಗಲೂ ನಿನ್ನ ಚರಣ ಸೇವೆಯನ್ನು ಮಾಡಿಲ್ಲ, ನಿನಗೆ ನಾನು ಸರಿಯಾಗಿ ಕಾಣಿಕೆಯನ್ನೂ ಸಮರ್ಪಿಸಿಲ್ಲ, ಹಾಗಿದ್ದರೂ ಇಂತಹ ಅಧಮನಾದ ಮಗನ ಮೇಲೂ ನೀನು ಎಂತಹ ಪ್ರೀತಿಯನ್ನು ಅನುಗ್ರಹಿಸಿರುವೆ. ದೇವಿ ಕೆಟ್ಟ ಮಗನು ಹುಟ್ಟ ಬಹುದು, ಆದರೆ ಕೆಟ್ಟ ತಾಯಿಯು ಇರಲು ಸಾಧ್ಯವಿಲ್ಲವಲ್ಲವೇ ?

**ಪರಿತ್ಯಕ್ತಾ ದೇವಾ ವಿವಿಧವಿಧಸೇವಾಕುಲತಯಾ**
**ಮಯಾ ಪಂಚಾಶೀತೇರಧಿಕಮಪನೀತೇ ತು ವಯಸಿ |**
**ಇದಾನೀಂ ಚೇನ್ಮಾತಸ್ತವ ಯದಿ ಕೃಪಾ ನಾಪಿ ಭವಿತಾ**
**ನಿರಾಲಂಬೋ ಲಂಬೋದರಜನನಿ ಕಂ ಯಾಮಿ ಶರಣಮ್ ||** ||೫||

ಹೇ ದೇವಿ ಸರ್ವವಿಘ್ನನಾಶಕನಾದಂತಹವನಿಗೆ ಜನ್ಮವಿತ್ತ ಜಗಜ್ಜನನಿ, ನಾನು ಹಲವಾರು ವಿಧವಾದ ಸೇವೆಯಿಂದ ವ್ಯಾಕುಲನಾಗಿದ್ದೇನೆ. ಬಹುವರ್ಷದಿಂದ ಇತರ ದೇವತೆಗಳ ಸೇವೆ ಮಾಡಿ ಬೇಸರ ಹೊಂದಿದ್ದೇನೆ. ನಾನು ಈಗ ಎಲ್ಲಾ ದೇವತೆಗಳನ್ನೂ ದೂರ ಮಾಡಿದ್ದೇನೆ. ಈಗ ಅವರ ಪೂಜೆಮಾಡಲೂ ನನ್ನಿಂದ ಸಾಧ್ಯವಿಲ್ಲವಾಗಿದೆ. ಆದರಿಂದ ಏನಾದರೊಂದು ಸಹಾಯ ಪಡೆಯ ಬೇಕೆಂಬ ಅಭಿಲಾಷೆಯೂ ಇಲ್ಲವಾಗಿದೆ. ಈಗ ನೀನು ರಕ್ಷಣೆ ನೀಡದಿದ್ದರೆ ನಾನು ಯಾರನ್ನು ಶರಣು ಹೋಗಲಿ? ಯಾರನ್ನು ಅವಲಂಬಿಸಲಿ ?

**ಶ್ವಪಾಕೋ ಜಲ್ಪಾಕೋ ಭವತಿ ಮಧುಪಾಕೋಪಮಗಿರಾ**
**ನಿರಾತಂಕೋ ರಂಕೋ ವಿರಹಿತ ಚಿರಂ ಕೋಟಿಕನಕೈಃ |**
**ತವಾಪರ್ಣೇ ಕರ್ಣೇ ವಿಶತಿ ಮನುವರ್ಣೇ ಫಲಮಿದಂ**
**ಜನಃ ಕೋ ಜಾನಿತೇ ಜನನಿ ಜಪನೀಯಂ ಜಪವಿಧೌ ||** ||೬||

ಹೇ ಮಾತೆ, ನಿನ್ನ ಮಂತ್ರದ ಒಂದೇ ಒಂದು ಶಬ್ದವು ಕಿವಿಯಲ್ಲಿ ಬೀಳುವುದಾದರೆ ಮೂರ್ಖನೂ, ಚಾಂಡಲನೂ, ಮಧುರವಾದ ಮಾತನಾಡ ಬಲ್ಲವನಾಗುತ್ತಾನೆ.

ದೀನನಾದವನೂ ಧನವಂತನಾಗುತ್ತಾನೆ. ನಿನ್ನ ಭಕ್ತರು ಸುಖಿ ಸಂತೋಷದಿಂದ ಬಹುಕಾಲ ಬದುಕುವವರಾಗುತ್ತಾರೆ. ಒಂದೇ ಒಂದು ಅಕ್ಷರದ ಮಹಿಮೆಯು ಹೀಗಿರುವಾಗ ವಿಧಿಪೂರ್ವಕವಾಗಿ ಪೂಜೆ ಮಾಡಿದವರಿಗೆ ಎಂತಹ ಫಲ ಲಭಿಸಬಹುದು, ನಿನ್ನ ಜಪವನ್ನು ಮಾಡುವವರಿಗೆ ಎಂತಹ ಫಲವು ದೊರೆಯಬಹುದು, ಯಾರಿಂದ ತಾನೇ ಇದನ್ನು ಅರಿಯಲು ಸಾಧ್ಯ ? ದೇವಿ ನಿನ್ನ ಮಹಿಮೆ ಅಪಾರವಾದುದು.

**ಚಿತಾಭಸ್ಮಾಲೇಪೋ ಗರಲಮಶನಂ ದಿಕ್ಪಟಧರೋ**
**ಜಟಾಧಾರೀ ಕಂಠೇ.ಭುಜಗಪತಿಹಾರೀ ಪಶುಪತಿಃ |**
**ಕಪಾಲೀ ಭೂತೇಶೋ ಭಜತಿ ಜಗದೀಶೈಕಪದವೀಂ**
**ಭವಾನಿ ತ್ವತ್ಪಾಣಿಗ್ರಹಣಪರಿಪಾಟೀ ಫಲಮಿದಮ್ ||** ||೭||

ಹೇ ಭವಾನಿ, ಈಶ್ವರನು ಚಿತೆಯ ಬೂದಿಯನ್ನು ಮೈಗೆಲ್ಲ ಬಳಿದುಕೊಂಡಿದ್ದಾನೆ. ವಿಷವೇ ಅವನ ಆಹಾರ. ದಿಕ್ಕುಗಳೇ ಅವನ ಬಟ್ಟೆಗಳು. ಜಟೆಗಳನ್ನು ಕಟ್ಟಿದ್ದಾನೆ. ಕತ್ತಿನಲ್ಲಿ ನಾಗರಾಜನನ್ನು ಹಾರವಾಗಿ ಹಾಕಿಕೊಂಡಿದ್ದಾನೆ. ಅವನು ಭೂತಗಳ ಒಡೆಯ, ಬ್ರಹ್ಮಕಪಾಲವನ್ನು ಕೈನಲ್ಲಿ ಹಿಡಿದಿದ್ದಾನೆ. ಹೀಗಿದ್ದೂ ಅವನು ಜಗತ್ತಿಗೆ ಒಡೆಯನಾಗಿ ಇಡೀ ವಿಶ್ವವನ್ನೇ ಪಾಲಿಸುವ ಏಕಮೇವ ಒಡೆಯನೆಂಬ ಹೆಸರಿಗೆ ಪಾತ್ರನಾಗಿರುವುದು ತಾಯೆ ನಿನ್ನ ಕೈಹಿಡಿದುದರ ಫಲ

**ನಮೋಕ್ಷಸ್ಯಾಕಾಂಕ್ಷಾ ಭವವಿಭವವಾಂಛಾಪಿ ಚ ನ ಮೇ**
**ನ ವಿಜ್ಞಾನಾಪೇಕ್ಷಾ ಶಶಿಮುಖಿ ಸುಖೇಚ್ಛಾಪಿ ನ ಪುನಃ |**
**ಅತಸ್ತ್ವಾಂ ಸಂಯಾಚೇ ಜನನಿ ಜನನಂ ಯಾತು ಮಮ ವೈ**
**ಮೃಡಾನೀ ರುದ್ರಾಣೀ ಶಿವ ಶಿವ ಭವಾನೀತಿ ಜಪತಃ ||** ||೮||

ಹೇ ಚಂದ್ರಮುಖಿ ! ನನಗೆ ಮೋಕ್ಷವನ್ನು ಪಡೆಯಬೇಕೆಂಬ ಬಯಕೆಯೂ ಇಲ್ಲ, ಈ ಸಂಸಾರದಲ್ಲಿ ವೈಭವದಿಂದ ಮೆರೆಯಬೇಕೆಂಬ ಲಾಲಸೆಯೂ ಇಲ್ಲ. ವಿಜ್ಞಾನದ ಅನುಭವ ಪಡೆಯಬೇಕೆಂಬ ಬಯಕೆಯೂ ಇಲ್ಲ. ಸುಖದ ಆಕಾಂಕ್ಷೆಯೂ ಇಲ್ಲ. ಆದುದರಿಂದ ದೇವಿ ಈ ನನ್ನ ಬೇಡಿಕೆಯನ್ನು ಮನ್ನಿಸು ನಾವು ನಿನ್ನ ರೂಪಗಳಾದ ಮೃಡಾನಿ, ರುದ್ರಾಣಿ, ಶಿವ, ಭವಾನಿ ಮೊದಲಾದ ನಾಮಗಳನ್ನು ಜಪ ಮಾಡುವ ಭಾಗ್ಯವನ್ನು ಅನುಗ್ರಹಿಸು.

**ನಾರಾಧಿತಾಸಿ ವಿಧಿನಾ ವಿವಿಧೋಪಚಾರೈಃ**
**ಕಿಂ ರೂಕ್ಷಚಿಂತನಪರೈರ್ನ ಕೃತಂ ವಚೋಭಿಃ |**
**ಶ್ಯಾಮೇ ತ್ವಮೇವ ಯದಿ ಕಿಂಚನ ಮಯ್ಯನಾಥೇ**
**ಧತ್ಸೇ ಕೃಪಾಮುಚಿತಮಂಬ ಪರಂ ತವೈವ ||** ||೯||

ಹೇ ಕಾಶಿಕಾಂಬ ! ನಾನಾ ವಿಧವಾದ ಪ್ರಕಾರಗಳಿಂದ, ಬಗೆ ಬಗೆಯ ಪೂಜಾ

ಸಾಮಗ್ರಿಗಳಿಂದ ವಿಧಿಪೂರ್ವಕವಾಗಿ ನಿನ್ನ ಆರಾಧನೆ ಮಾಡಲು ನನ್ನಿಂದ ಸಾಧ್ಯವಾಗಲಿಲ್ಲ. ಸದಾ ಕಠಿಣ ಶಬ್ದಗಳ ಮಾತನಾಡುವ ನನ್ನ ನಾಲಿಗೆಯು ಎಂತೆಂತಹ ಕಠೋರವಾದ ಮಾತನಾಡದಿರಲು ಸಾಧ್ಯ ? ಹಾಗಿದ್ದರೂ ಇಂತಹ ಈ ಅನಾಥನ ಮೇಲೆ ಎಂತಹ ಕೃಪಾದೃಷ್ಟಿಯನ್ನು ಬೀರಿರುವೆ. ಹೇ ಮಾತೆ, ಕರುಣಾಮಯಿಯಾದ ನಿನಗೆ ತಕ್ಕುದಾದುದನ್ನೇ ನೀನು ಮಾಡಿರುವೆ. ನಿನಂತಹ ಕೃಪಾಮಯಿಯಾದ ಮಾತೆಯಿಂದ ತಾನೇ ನನ್ನಂತಹ ಕುಪುತ್ರರನ್ನೂ ಕಾಪಾಡಲು ಸಾಧ್ಯ, ಹೇ ದಯಾಮಯಿ ನನಗೆ ನಿನ್ನ ಆಶ್ರಯವನ್ನು ನೀಡುವವಳಾಗು.

ಆಪತ್ಸು ಮಗ್ನಃ ಸ್ಮರಣಂ ತ್ವದೀಯಂ
ಕರೋಮಿ ದುರ್ಗೇ ಕರುಣಾರ್ಣವೇಶಿ |
ನೈತಚ್ಛಠತ್ವಂ ಮಮ ಭಾವಯೇಥಾಃ
ಕ್ಷುದಾತೃಷಾರ್ತಾ ಜನನೀಂ ಸ್ಮರಂತೀ || ||೧೦||

ಹೇ ಮಾತೆ ದುರ್ಗೆ ! ಕರುಣಾ ಸಿಂಧು ! ಮಾಹೇಶ್ವರೀ ! ಜಗದಂಬ ! ನಾನು ಸುಖದಲ್ಲಿದ್ದಾಗ ನಿನ್ನ ಸ್ಮರಣೆ ಮಾಡಲಿಲ್ಲ. ಈಗ ವಿಪತ್ತಿನಲ್ಲಿ ಸಿಕ್ಕಿ ಬಿದ್ದಿರುತ್ತೇನೆ. ನಿನ್ನ ಈ ಮೂರ್ಖತನವನ್ನು ಮನ್ನಿಸು. ಹೇಗೆಂದರೆ ಹಸಿವು ಬಾಯಾರಿಕೆಯಿಂದ ಕೂಡಿದ ಮಗುವು ತಾಯಿಯ ಸ್ಮರಣೆ ಮಾತ್ರ ಮಾಡುವುದಲ್ಲವೇ?

ಜಗದಂಬ ವಿಚಿತ್ರಮತ್ರ ಕಿಂ
ಪರಿಪೂರ್ಣಾ ಕರುಣಾಸ್ತಿ ಚೇನ್ಮಯಿ
ಅಪರಾಧ ಪರಂಪರಾವೃತಂ
ನ ಹಿ ಮಾತಾ ಸಮುಪೇಕ್ಷತೇ ಸುತಮ್ || ||೧೧||

ಹೇ ಜಗಜ್ಜನನಿ ! ನಿನ್ನ ಕೃಪಾದೃಷ್ಟಿಯು ನನ್ನ ಮೇಲೆ ಬೀಳುವುದರಲ್ಲಿ ಆಶ್ಚರ್ಯವಾದರೂ ಏನಿರುವುದು, ಮಗನು ಪುನಃ ಪುನಃ ತಪ್ಪು ಮಾಡುತ್ತಿದ್ದರೂ ತಾಯಿಯು ಅವನನ್ನು ಸದಾ ಮನ್ನಿಸುವುದಿಲ್ಲವೇ ? ತಾಯಿಯು ಅದನ್ನು ಉಪೇಕ್ಷಿಸುವುದಿಲ್ಲವೇ ! ಅದರಂತೆ ಹೇ ಮಾತೆ ನನ್ನ ಎಲ್ಲಾ ಅಪರಾಧಗಳನ್ನೂ ಮನ್ನಿಸಿ ನನಗೆ ನಿನ್ನ ಕೃಪಾಕಟಾಕ್ಷವನ್ನು ತೋರುವವಳಾಗು.

ಮತ್ಸಮಃ ಪಾತಕೀ ನಾಸ್ತಿ ಪಾಪಘ್ನೀ ತ್ವತ್ಸಮಾ ನ ಹಿ |
ಏವಂ ಜ್ಞಾತ್ವಾ ಮಹಾದೇವಿ ಯಥಾಯೋಗ್ಯಂ ತಥಾ ಕುರು ||೧೨||

ಮಹಾದೇವಿ ನನ್ನಂತಹ ಪಾತಕಿಯೂ ಇರಲಾರನು, ನಿನ್ನಂತಹ ಪಾಪ ಹಾರಿಣಿಯೂ ಇರಲಾರಳು. ಆದುದರಿಂದ ನಿನಗೆ ಉಚಿತವಾದುದನ್ನೇ ಮಾಡುವವಳಾಗು.

ಶ್ರೀ ಶಂಕರಾಚಾರ್ಯ ವಿರಚಿತ ದೇವ್ಯಪರಾಧಕ್ಷಮಾಪವಣ ಸ್ತೋತ್ರವು
ಸಂಪೂರ್ಣವಾಯಿತು.

ಅಧ್ಯಾಯ ೧೩

# ದೇವೀ ಕ್ಷಮಾಪ್ರಾರ್ಥನೆ

**ಅಪರಾಧಸಹಸ್ರಾಣಿ ಕ್ರಿಯಂತೇಽಹರ್ನಿಶಂ ಮಯಾ |**
**ದಾಸೋಽಹಮಿತಿ ಮಾಂ ಮತ್ವಾ ಕ್ಷಮಸ್ವ ಪರಮೇಶ್ವರಿ || ||೧||**

ಹೇ ಪರಮೇಶ್ವರಿ, ಹಗಲೂ-ರಾತ್ರಿ ನನ್ನಿಂದ ಗೋಚರವಾಗುವ ಗೋಚರವಾಗದ ಅಪರಾಧ ಸಹಸ್ರಗಳು ನಡೆದುಕೊಂಡಿವೆ. ಕ್ಷಮಾಮಯಿಯಾದ ನೀನು ದಯವಿರಿಸಿ ಅವುಗಳನ್ನು ಕೃಪಾಪೂರ್ವಕವಾಗಿ ಕ್ಷಮಿಸುವವಳಾಗು.

**ಆವಾಹನಂ ನ ಜಾನಾಮಿ ನ ಜಾನಾಮಿ ವಿಸರ್ಜನಮ್ |**
**ಪೂಜಾಂ ಚೈವ ನ ಜಾನಾಮಿ ಕ್ಷಮ್ಯತಾಂ ಪರಮೇಶ್ವರಿ || ||೨||**

ಹೇ ಪರಮೇಶ್ವರಿ ನನಗೆ ನಿನ್ನ ಆವಾಹನ ಮಾಡುವುದು ಅರಿಯದು. ನಿನ್ನ ವಿಸರ್ಜನೆ ಮಾಡುವುದನ್ನೂ ನಾನು ಅರಿಯೆನು. ನನಗೆ ನಿನ್ನ ಪೂಜೆ ಮಾಡುವ ಕ್ರಮವೂ ಸಹ ಗೊತ್ತಿಲ್ಲ, ದೇವಿ ನನ್ನನ್ನು ಕ್ಷಮಿಸುವವಳಾಗು.

**ಮಂತ್ರಹೀನಂ ಕ್ರಿಯಾಹೀನಂ ಭಕ್ತಿಹೀನಂ ಸುರೇಶ್ವರೀ**
**ಯತ್ಪೂಜಿತಂ ಮಯಾ ದೇವಿ ಪರಿಪೂರ್ಣಂ ತದಸ್ತುಮೇ || ||೩||**

ದೇವಿ, ಹೇ ಸುರೇಶ್ವರಿ, ನಾನು ಯಾವ ಮಂತ್ರಲೋಪ ಮಾಡಿರುವೆನೋ, ಕ್ರಿಯಾಲೋಪ ಮಾಡಿರುವೆನೋ, ಭಕ್ತಿಲೋಪ ಮಾಡಿರುವೆನೋ ಅವುಗಳನ್ನು ಕ್ಷಮಾಮಯಿಯಾದ ನೀನು ಮನ್ನಿಸುವವಳಾಗು.

**ಅಪರಾಧಶತಂ ಕೃತ್ವಾ ಜಗದಂಬೇತಿ ಚೋಚ್ಚರೇತ್ |**
**ಯಾಂ ಗತಿಂ ಸಮವಾಪ್ನೋತಿ ನ ತಾಂ ಬ್ರಹ್ಮಾದಯಃ ಸುರಾಃ || ||೪||**

ಸಹಸ್ರ ಅಪರಾಧಗಳನ್ನು ಮಾಡಿದನಂತರವೂ, ಜಗದಂಬೆ ನಾನು ನಿನ್ನನ್ನು ಶರಣು ಬರುತ್ತಿದ್ದೇನೆ. 'ಜಗದಂಬಾ ' ಎಂದು ನಿನ್ನನ್ನು ಪ್ರಾರ್ಥಿಸುತ್ತಾ ನಿನ್ನನ್ನು ಧ್ಯಾನ ಮಾಡುವವರೋ ಅವರಿಗೆ ಅದೇ ಸದ್ಗತಿಯನ್ನು ನೀಡುವೆಯಲ್ಲವೇ ? ಬ್ರಹ್ಮಾದಿ ದೇವತೆಗಳಿಗೂ ಸಹ ಅದು ಸುಲಭಸಾಧ್ಯವಲ್ಲವಲ್ಲವೇ ?

**ಸಾಪರಾಧೋಽಸ್ಮಿ ಶರಣಂ ಪ್ರಾಪ್ತಸ್ತ್ವಾಂ ಜಗದಂಬಿಕೇ |**
**ಇದಾನೀಮನುಕಂಪ್ಯೋಽಹಂ ಯಥೇಚ್ಛಸಿ ತಥಾ ಕುರು || ||೫||**

ಹೇ ಜಗದಂಬಿಕೆ, ನಾನು ಅಪರಾಧಿ, ಆದರೆ ನಿನ್ನ ಪಾದಾರವಿಂದವನ್ನು ನಂಬಿ ಶರಣು ಬಂದಿದ್ದೇನೆ. ಆದುದರಿಂದ ಕ್ಷಮಾಮಯಿಯಾದ ನೀನು ನನ್ನ ಅಪರಾಧಗಳನ್ನು ಕ್ಷಮಿಸುವವಳಾಗು. ದೇವಿ ಈಗ ನಿನ್ನ ಮನಸ್ಸಿಗೆ ಹೇಗೆ ತೋರುವುದೋ ಹಾಗೆ ಮಾಡುವವಳಾಗು.

**ಅಜ್ಞಾನಾದ್ವಿಸ್ಮೃತೇರ್ಭ್ರಾಂತ್ಯಾ ಯನ್ನ್ಯೂನ ಮಧಿಕಮ್ ಕೃತಮ್**
**ತತ್ಸರ್ವಂ ಕ್ಷಮ್ಯತಾಂ ದೇವಿ ಪ್ರಸೀದ ಪರಮೇಶ್ವರಿ ||** ||೬||

ದೇವಿ, ಪರಮೇಶ್ವರಿ, ಅಜ್ಞಾನದಿಂದ,ಮರೆವಿನಿಂದ ಅಥವಾ ಬುದ್ಧಿಭ್ರಾಂತಿಯಿಂದಾಗಿ ನಾನು ಯಾವ ಯಾವ ನ್ಯೂನತೆಗಳನ್ನು ಮಾಡಿರುವೆನೋ ಅಥವಾ ಯಾವುದನ್ನು ಅತಿಯಾದ ಅಪರಾಧವೆನ್ನುತ್ತೇವೆಯೋ ಅವನ್ನು ಮಾಡಿರುವೆನೋ ಅದನ್ನು ನೀನು ಮನ್ನಿಸುವವಳಾಗು. ನನ್ನನ್ನು ಕ್ಷಮಿಸು.

**ಕಾಮೇಶ್ವರಿ ಜಗನ್ಮಾತಃ ಸಚ್ಚಿದಾನಂದವಿಗ್ರಹೇ |**
**ಗೃಹಾಣಾರ್ಚಾಮಿಮಾಂ ಪ್ರೀತ್ಯಾ ಪ್ರಸೀದ ಪರಮೇಶ್ವರಿ ||** ||೭||

ಸಚ್ಚಿದಾನಂದರೂಪಿಣಿಯಾದ ಹೇ ಕಾಮೇಶ್ವರಿ, ಜಗತ್ತಿನ ಕಾಮನೆಗಳನ್ನು ಈಡೇರಿಸುವ ಈಶ್ವರಿ, ನೀನು ಪ್ರೇಮಪೂರ್ವಕವಾಗಿ ನನ್ನ ಈ ಪೂಜೆಯನ್ನು ಸ್ವೀಕರಿಸು. ನನ್ನನ್ನು ಕೃತಾರ್ಥನನ್ನಾಗಿ ಮಾಡುವವಳಾಗು.

**ಗುಹ್ಯಾತಿಗುಹ್ಯಗೋಪ್ತ್ರೀ ತ್ವಂ ಗೃಹಾಣಾಸ್ಮತ್ಕೃತಂ ಜಪಮ್ |**
**ಸಿದ್ಧಿರ್ಭವತು ಮೇ ದೇವಿ ತ್ವತ್ಪ್ರಸಾದಾನ್ಮಹೇಶ್ವರಿ ||** ||೮||

ಹೇ ದೇವಿ, ಮಹೇಶ್ವರಿ ನೀನು ಗುಪ್ತವಾದವುಗಳಲ್ಲಿ ಗುಪ್ತವಾದವುಗಳನ್ನೂ ರಕ್ಷಣೆಮಾಡಬಲ್ಲಂತಹವಳು. ನನ್ನ ನಿವೇದನೆಯನ್ನು ಕೇಳುವವಳಾಗು. ನಿನ್ನ ದಯೆಯಿಂದ ನನ್ನ ಬಯಕೆಯನ್ನು ನೆರವೇರಿಸು.

**|| ಸರ್ವಂ ಸಪ್ತಮಾತೃಕಾರ್ಪಣಮಸ್ತು ||**



ಅಧ್ಯಾಯ ೧೪

# ಅಪರಾಧಕ್ಷಮಾಪಣಾಸ್ತೋತ್ರಮ್

**ಅಪರಾಧಶತಂ ಕೃತ್ವಾ ಜಗದಂಬೇತಿ ಚೋಚ್ಚರೇತ್ |**
**ಯಾಂ ಗತಿಂ ಸಮವಾಪ್ನೋತಿ ನ ತಾಂ ಬ್ರಹ್ಮಾದಯಸ್ಸುರಾಃ ||೧||**

ನೂರು ಅಪರಾಧಗಳನ್ನು ಮಾಡಿದ್ದರೂ ಸಹ ಯಾರು ಭಕ್ತಿಯಿಂದ 'ಹೇ ಜಗದಂಬೆ' ಎಂದು ಉಚ್ಚರಿಸುವರೋ ಅವರು ಪಡೆಯುವ ಗತಿಯನ್ನು ಬ್ರಹ್ಮಾದಿಗಳೂ ಸಹ ಪಡೆಯಲಾರರು.

**ಸಾಪರಾಧೋಽಸ್ಮಿ ಶರಣಂ ಪ್ರಾಪ್ತಸ್ತ್ವಾಂ ಜಗದಂಬಿಕೇ |**
**ಇದಾನೀಮನುಕಂಪ್ಯೋಽಹಂ ಯಥೇಚ್ಛಸಿ ತಥಾ ಕುರು || ||೨||**

ಹೇ ಜಗದಂಬಿಕೆ, ನಾನು ನಿನ್ನನ್ನು ಶರಣು ಹೊಂದಿದ್ದೇನೆ. ಹಿಂದೆ ಹಲವಾರು ಅಪರಾಧಗಳನ್ನು ಮಾಡಿರುತ್ತೇನೆ. ನಾನು ಈಗ ನಿನ್ನ ಅನುಕಂಪದಲ್ಲಿರುತ್ತೇನೆ. ನಿನ್ನ ಅನುಕಂಪಕ್ಕೆ ಯೋಗ್ಯನಾಗಿರುತ್ತೇನೆ. ನಿನ್ನಿಚ್ಛೆ ಬಂದಂತೆ ಮಾಡು.

**ಅಜ್ಞಾನಾದ್ವಿಸ್ಮೃತೇರ್ಭ್ರಾಂತ್ಯಾ ಯನ್ನ್ಯೂನಮಧಿಕಂ ಕೃತಮ್ |**
**ತತ್ಸರ್ವಂ ಕ್ಷಮ್ಯತಾಂ ದೇವಿ ಪ್ರಸೀದ ಪರಮೇಶ್ವರಿ || ||೩||**

ಅಜ್ಞಾನದಿಂದಾಗಲೀ, ಮರೆವಿನಿಂದಾಗಲೀ, ಭ್ರಾಂತಿಯಿಂದಾಗಲೀ, ನಿನ್ನ ಪಾರಾಯಣದಲ್ಲಿ ನ್ಯೂನಾಧಿಕ್ಯಗಳೆಂಬ ದೋಷಗಳನ್ನು ಮಾಡಿದ್ದರೂ ಸರಿ ಹೇ ದೇವಿ, ನನ್ನನ್ನು ಕ್ಷಮಿಸಿ ಕಾಪಾಡು, ಹೇ ತಾಯಿ, ಪರಮೇಶ್ವರಿ ಪ್ರಸನ್ನಳಾಗು.

**ಕಾಮೇಶ್ವರಿ ಜಗನ್ಮಾತಃ ಸಚ್ಚಿದಾನಂದವಿಗ್ರಹೇ |**
**ಗೃಹಾಣಾರ್ಚಾಮಿಮಾಂ ಪ್ರೀತ್ಯಾ ಪ್ರಸೀದ ಪರಮೇಶ್ವರಿ || ||೪||**

ಹೇ ಕಾಮೇಶ್ವರಿ, ಜಗನ್ಮಾತೆ, ಸಚ್ಚಿದಾನಂದಸ್ವರೂಪಿಣಿ, ನನ್ನ ಈ ಪೂಜೆಯನ್ನು ಸ್ವೀಕರಿಸುವವಳಾಗು, ಹೇ ಪರಮೇಶ್ವರಿ ಪ್ರಸನ್ನಳಾಗು.

**ಸರ್ವರೂಪಮಯೀ ದೇವೀ ಸರ್ವಂ ದೇವೀಮಯಂ ಜಗತ್|**
**- ಅತೋಽಹಂ ವಿಶ್ವರೂಪಾಂ ತ್ವಾಂ ನಮಾಮಿ ಪರಮೇಶ್ವರೀಮ್ || ||೫||**

ಹೇ ದೇವಿ ನೀನು ಸರ್ವರೂಪದಲ್ಲಿಯೂ ಸ್ಥಿರಳಾಗಿರುವೆ, ಜಗತ್ತೆಲ್ಲವೂ ದೇವೀಮಯದಿಂದ ವ್ಯಾಪ್ತವಾಗಿದೆ. ನಿನ್ನ ರೂಪವೇ ಈ ವಿಶ್ವವು. ಅಂತಹ ಪರಮೇಶ್ವರಿಯನ್ನು ವಂದಿಸುತ್ತೇನೆ.

**ಯದಕ್ಷರಂ ಪರಿಭ್ರಷ್ಟಂ ಮಾತ್ರಾಹೀನಂ ಚ ಯದ್ಭವೇತ್ |**
**ಪೂರ್ಣಂ ಭವತು ತತ್ಸರ್ವಂ ತ್ವತ್ಪ್ರಸಾದಾನ್ಮಹೇಶ್ವರಿ || ||೬||**

ಹೇ ಪರಮೇಶ್ವರಿ, ಅಕ್ಷರಲೋಪ, ಮಾತ್ರಾಕಾಲವನ್ನು ಕಡಿಮೆ ಮಾಡುವುದು, ಮೊದಲಾದ ಯಾವುದೇ ದೋಷಗಳಿದ್ದರೂ ಅವೆಲ್ಲವೂ ನಿನ್ನ ಅನುಗ್ರಹದಿಂದ ಸರಿಹೋಗಲಿ.

**ಯದತ್ರ ಪಾಠೇ ಜಗದಂಬಿಕೇ ಮಯಾ**
**ವಿಸರ್ಗಬಿಂದ್ವಕ್ಷರಹೀನಮೀರಿತಮ್ |**
**ತದಸ್ತು ಸಂಪೂರ್ಣತಮಂ ಪ್ರಸಾದತಃ**
**ಸಂಕಲ್ಪಸಿದ್ಧಿಶ್ಚ ಸದೈವ ಜಾಯತಾಮ್ || ||೭||**

ಹೇ ಜಗದಂಬಿಕೆ ಪಾರಾಯಣಕಾಲದಲ್ಲಿ ವಿಸರ್ಗ, ಬಿಂದು ಅಕ್ಷರಗಳನ್ನು ಬಿಟ್ಟು ಯಾವುದೇ ಉಚ್ಚಾರಣೆಯನ್ನು ನಾನು ಮಾಡಿರುವೆನೋ ಅವೆಲ್ಲವೂ ನಿನ್ನ ಅನುಗ್ರಹದಿಂದ ಸರಿಯಾಗಲಿ, ನನ್ನ ಸಂಕಲ್ಪಗಳನ್ನು ಸಿದ್ಧಿಸುವಂತೆ ಮಾಡುವವಳಾಗು.

**ಯನ್ಮಾತ್ರಾ ಬಿಂದುಬಿಂದುದ್ವಿತಯಪದಪದದ್ವಂದ್ವವರ್ಣಾದಿಹೀನಂ**
**ಭಕ್ತ್ಯಾಽಭಕ್ತ್ಯಾನುಪೂರ್ವಂ ಪ್ರಸಭಕೃತಿವಶಾದ್ ವ್ಯಕ್ತಮವ್ಯಕ್ತಮಂಬ |**
**ಮೋಹಾದಜ್ಞಾನತೋ ವಾ ಪಠಿತಮಪಠಿತಂ ಸಾಂಪ್ರತಂ ತೇಸ್ತವೇಽಸ್ಮಿನ್**
**ತತ್ಸರ್ವಂ ಸಾಂಗಮಾಸ್ತಾಂ ಭಗವತಿ ವರದೇ ತ್ವತ್ಪ್ರಸಾದಾತ್ ಪ್ರಸೀದ ||೮||**

ಹೇ ತಾಯೆ, ನಿನ್ನ ಸ್ತೋತ್ರವನ್ನು ಬೇಗ ಬೇಗ ಪಾರಾಯಣ ಮಾಡುವಾಗ ಮಾತ್ರಾಕಾಲದ ವ್ಯತ್ಯಾಸ, ಅನುಸ್ವಾರ ವಿಸರ್ಗಗಳ ವ್ಯತ್ಯಾಸ, ಪದಲೋಪ, ಸಮಾಸ ವ್ಯತ್ಯಾಸ, ಹೊಸಪದದ ಸೇರುವಿಕೆ, ಅರ್ಥದ ಕಡೆಗೆ ಗಮನ ಕೊಡದೆ ಸುಮ್ಮನೆ ಓದುವುದು, ಮೊದಲಾದ ದೋಷಗಳನ್ನು ಸ್ಪಷ್ಟವಾಗಿಯಾಗಲಿ, ಅಸ್ಪಷ್ಟ ವಾಗಿಯಾಗಲೀ ಮಾಡಿರುವೆನೋ, ಅವುಗಳನ್ನು ನೀನು ಮನ್ನಿಸಿ, ನನ್ನ ಪಾರಾಯಣವು ಸಾಂಗವಾಗುವಂತೆ ಮಾಡುವವಳಾಗು. ಹೇ ವರದಾತೆ ಪ್ರಸನ್ನಳಾಗು.

**ಪ್ರಸೀದ ಭಗವತ್ಯಂಬ ಪ್ರಸೀದ ಭಕ್ತವತ್ಸಲೇ |**
**ಪ್ರಸಾದಂ ಕುರು ಮೇ ದೇವಿ ದುರ್ಗೇ ದೇವಿ ನಮೋಽಸ್ತು ತೇ ||೯||**

ಹೇ ತಾಯಿ, ಭಗವತಿ ಭಕ್ತವತ್ಸಲೆ, ಅನುಗ್ರಹಿಸುವವಳಾಗು, ಹೇ ದೇವಿ , ಹೇ ದುರ್ಗೆ ನಿನಗೆ ನಮಸ್ಕರಿಸುವೆನು.



ಅಧ್ಯಾಯ ೧೫

ಶ್ರೀ ಸಪ್ತಮಾತೃಕಾಯೈ ನಮಃ

# ಶ್ರೀ ಸಪ್ತಮಾತೃಕಾ ಅಷ್ಟೋತ್ತರಶತನಾಮಸ್ತೋತ್ರ

**ಈಶ್ವರ ಉವಾಚ**

**ಶತನಾಮ ಪ್ರವಕ್ಷ್ಯಾಮಿ ಶೃಣುಶ್ವ ಕಮಲಾನನೇ |**
**ಯಸ್ಯ ಪ್ರಸಾದಮಾತ್ರೇಣ ದುರ್ಗಾ ಪ್ರೀತಾ ಭವೇತ್ ಸತಿ || ||೧||**

ಪರಮೇಶ್ವರನು ಪಾರ್ವತಿಯನ್ನು ಕುರಿತು ಇಂತೆಂದನು. ಒಂದು ದಿನ ಪರಮೇಶ್ವರನು ದೇವೀಶಕ್ತಿಯ ವರ್ಣನೆಯನ್ನು ಪಾರ್ವತೀ ದೇವಿಗೆ ವಿವರಿಸುತ್ತಿದ್ದನು. ಆಗ ದೇವಿಯು ಸುಲಭವಾಗಿ ದೇವಿಯ ಕೃಪೆ ದೊರೆಯಲು ಏನು ಮಾಡಬೇಕೆಂದು ಪ್ರಶ್ನಿಸಿದಳು. ಅದರಿಂದ ಸಂತೋಷಭರಿತನಾದ ಪರಮೇಶ್ವರನು ಕೃಪೆಮಾಡಿ ದೇವೀಮಾಹಾತ್ಮ್ಯೆಯ ಫಲ ದೊರೆಯಬೇಕಾದರೆ ದೇವಿಯ ಅಷ್ಟೋತ್ತರ ಶತನಾಮವನ್ನು ಭಕ್ತಿಯಿಂದ ಪಠಿಸಬೇಕೆಂದು ಉಪದೇಶಿಸಿದನು. ಪರಮಕರುಣಾಮಯಿಯಾದ ದೇವಿಯು ಪ್ರಸನ್ನಳಾಗು ಕಮಲದಂತಹ ಕಣ್ಣುಗಳುಳ್ಳ ದೇವಿ, ಕೇಳು

**ಓಂ ಸತೀ ಸಾಧ್ವೀ ಭವಪ್ರೀತಾ ಭವಾನೀ ಭವಮೋಚನೀ |**
**ಆರ್ಯಾ ದುರ್ಗಾ ಜಯಾ ಚಾದ್ಯಾ, ತ್ರಿನೇತ್ರಾ ಶೂಲಧಾರಿಣಿ || ||೨||**

*ಓಂ ಸತೀ ಸಾಧ್ವೀ ಭವಪ್ರೀತಾ ಭವಾನೀ ಭವಮೋಚನೀ*
*ಆರ್ಯಾ, ದುರ್ಗಾ, ಜಯಾ, ಆಧ್ಯಾ, ತ್ರಿನೇತ್ರಾ, ಶೂಲಧಾರಿಣೀ.*

ಓಂ - ಪ್ರಣವ ಮಂತ್ರ, ಅ,ಉ,ಮ ಎಂಬ ಮೂರು ಸ್ವರಗಳ ಸಂಗಮ, ಓಂ ಇತ್ಯೇಕಾಕ್ಷರಮಿದಂ ಸರ್ವಮ್ ಮಾಂಡೂಕ್ಯಉಪನಿಷತ್ತಿನಲ್ಲಿ ಓಂ ಕಾರವೇ ಸರ್ವಸ್ವವೆಂದು ವಿವರಿಸಿದೆ. ಈ ಪ್ರಣವವೇ ಪರಬ್ರಹ್ಮ. ಅದು ಅಪೂರ್ವವಾದುದು. ಅನಂತವಾದುದು, ಅದಕ್ಕೆ ಹೊರತಾದುದು ಯಾವುದೂ ಇಲ್ಲ. ಇದು ಅವ್ಯಯವಾದುದು. ಅದೇ ಸರ್ವದರ ಆದಿ, ಮಧ್ಯ ಮತ್ತು ಅಂತ್ಯ, ಪ್ರಣವವನ್ನು ಅರಿಯುವುದೇ ಉತ್ತಮವಾದ ಜ್ಞಾನ. ಸರ್ವರ ಹೃದಯದಲ್ಲಿ ಅಂತರ್ಯಾಮಿಯಾಗಿ ನಿಗೂಢವಾಗಿರುವ ಪರಮೇಶ್ವರನ ರೂಪವೇ ಪ್ರಣವ. ಪ್ರಣವದ ಅನುಭವ ಪಡೆದವರು ಸುಖದುಃಖಗಳಿಂದ ಮುಕ್ತರಾಗುತ್ತಾರೆ. ಯಾರು ಓಂಕಾರದ ಸ್ವರೂಪವನ್ನು ಅರಿತಿರುವರೋ ಅವರೇ ಮುನಿಗಳು, ಜ್ಞಾನಿಗಳು.

ನಾರದ ಉಪನಿಷತ್ತಿನಲ್ಲಿ ಓಂ ತತ್ ಬ್ರಹ್ಮ, ಓಂ ತತ್ ವಾಯುಃ, ಓಂ ತದಾತ್ಮಾ, ಓಂ ತತ್ ಸತ್ಯಮ್, ಓಂ ತತ್ಸರ್ವಂ, ಓಂಕಾರವೇ ಬ್ರಹ್ಮ, ಅದೇ ವಾಯು,

ಅದೇ ಆತ್ಮವು, ಅದೇ ಸತ್ಯವಾದುದು, ಅದೇ ಸರ್ವವು ಎಂದು ವಿವರಿಸಿದೆ.

ಭಗವದ್ಗೀತೆಯಲ್ಲಿ ಶ್ರೀಕೃಷ್ಣನು "ಓಮಿತ್ಯೇಕಾಕ್ಷರಂ ಬ್ರಹ್ಮ" ಎಂದು ಹೇಳಿ ಯಾರು ಅಂತ್ಯಕಾಲದಲ್ಲಿ ನನ್ನನ್ನು ಸ್ಮರಿಸುವರೋ ಅವರು ನನ್ನನ್ನೇ ಪಡೆಯುತ್ತಾರೆ.

ಆದುದರಿಂದ ದೇವಿಯ ಅಷ್ಟೋತ್ತರಶತನಾಮವೆಲ್ಲವೂ ಓಂಕಾರದಿಂದಲೇ ಪ್ರಾರಂಭವಾಗುವುದರಿಂದ, ಇದು ಸರ್ವಸ್ವವೇ ಆಗಿದೆ.

**1. ಸತೀ ಓಂ ಸತ್ಯೈ ನಮಃ**

ಸ್ತ್ರೀ ಶಕ್ತಿ ರೂಪಳಾಗಿರುವ ದೇವಿಗೆ ನಮಸ್ಕಾರ, ದುರ್ಗಾದೇವಿಗೆ ನಮಸ್ಕಾರಗಳು

**2. ಸಾಧ್ವೀ, ಓಂ ಸಾಧ್ವ್ಯೈ ನಮಃ**

ಶುದ್ಧಸ್ವರೂಪಳೂ, ಜ್ಞಾನಮಯಳೂ, ಭಕ್ತರನ್ನು ಎಡೆಬಿಡದೇ ರಕ್ಷಿಸುವವಳೂ ಆದ ದೇವಿಗೆ ನಮಸ್ಕಾರಗಳು.

**3. ಭವಪ್ರೀತಾ, ಓಂ ಭವಪ್ರೀತಾಯೈ ನಮಃ**

ನೀನು ಆದಿ. ಈ ಜನ್ಮದ ಆಗುಹೋಗುಗಳಿಗೆ ಕಾರಣಳು, ಈ ಭವಸಾಗರದಿಂದ ದಾಟುವ ಮಾರ್ಗ ತೋರಿಸುವವಳು, ಮೋಕ್ಷದಾಯಿನಿಯಾದ ಪರಮೇಶ್ವರಿಗೆ ನಮಸ್ಕಾರಗಳು.

**4. ಭವಾನೀ, ಓಂ ಭವಾನ್ಯೈ ನಮಃ**

ಪಾರ್ವತಿಗೆ ನಮಸ್ಕಾರಗಳು, ಶಿವನ ಅರ್ಧಾಂಗಿಗೆ ನಮಸ್ಕಾರಗಳು ಶಿವ ಪ್ರಿಯೆಗೆ ನಮಸ್ಕಾರಗಳು.

**5. ಭವಮೋಚನೀ, ಓಂ ಭವಮೋಚನ್ಯೈ ನಮಃ**

ಈ ಹುಟ್ಟುಸಾವುಗಳ ಗೊಂದಲದಿಂದ ಕಾಪಾಡಿ ಮೋಕ್ಷವನ್ನು ದೊರಕಿಸಿಕೊಡುವ ದೇವಿಗೆ ನಮಸ್ಕಾರಗಳು.

**6. ಆರ್ಯಾ, ಓಂ ಆರ್ಯಾಯೈ ನಮಃ**

ಸರ್ವರಿಂದಲೂ ಪೂಜಿಸಲ್ಪಡುವ ದೇವಿಗೆ ನಮಸ್ಕಾರಗಳು. ಸರ್ವಶಕ್ತಿಮಯಿಯಾದ ದೇವಿಗೆ ನಮಸ್ಕಾರಗಳು.

**7. ದುರ್ಗಾ, ಓಂ ದುರ್ಗಾಯೈ ನಮಃ**

ಪರಶಿವನ ಪತ್ನಿಯಾದ ದುರ್ಗೆಗೆ ನಮಸ್ಕಾರಗಳು. ದುರ್ಗಮವಾದುದನ್ನೂ ಸುಲಭಗೊಳಿಸುವವಳಿಗೆ ನಮಸ್ಕಾರಗಳು.

**8. ಜಯಾ, ಓಂ ಜಯಾಯೈ ನಮಃ**

ನಂಬಿದವರಿಗೆ ಗೆಲುವನ್ನು ತಂದು ಕೊಡುವ ದೇವಿಗೆ ನಮಸ್ಕಾರಗಳು.

**9. ಆದ್ಯಾ, ಓಂ ಆದ್ಯಾಯೈ ನಮಃ**

ಸರ್ವ ಪ್ರಥಮಳಾದ ದೇವಿಗೆ ನಮಸ್ಕಾರಗಳು. ಧ್ಯಾನನಿರತರಿಗೆ ರಕ್ಷಕಳಾಗಿರುವ ಆದಿದೇವಿಗೆ ನಮಸ್ಕಾರಗಳು.

**10. ತ್ರಿನೇತ್ರಾ, ಓಂ ತ್ರಿನೇತ್ರಾಯೈ ನಮಃ**

ತನ್ನ ಮೂರುಕಣ್ಣುಗಳಿಂದ ಪ್ರಪಂಚವನ್ನೂ ಕಾಪಾಡುವ ದೇವಿಗೆ ನಮಸ್ಕಾರಗಳು.

**11. ಶೂಲಧಾರಿಣೀ, ಓಂ ಶೂಲಧಾರಿಣ್ಯೈ ನಮಃ**

ಸರ್ವ.ಶತ್ರುಸಂಹಾರಕಾರಣವಾಗಿರುವ ಶೂಲವನ್ನು ಧರಿಸಿರುವ ದೇವಿಗೆ ನಮಸ್ಕಾರಗಳು.

**ಪಿನಾಕ ಧಾರಿಣೀ ಚಿತ್ರಾ ಚಂಡಘಂಟಾ ಮಹಾತಪಾಃ |**
**ಮನೋಬುದ್ಧಿರಹಂಕಾರಾ ಚಿತ್ತರೂಪಾ ಚಿತಾಚಿತಿಃ ||೩||**
*ಪಿನಾಕಧಾರಿಣೀ ಚಿತ್ರಾ ಚಂಡಘಂಟಾ ಮಹಾತಪಾಃ |*
*ಮನಃ ಬುದ್ಧಿಃ ಅಹಂಕಾರಾ ಚಿತ್ತರೂಪಾ ಚಿತಾ ಚಿತಿಃ*

**12. ಪಿನಾಕಧಾರಿಣೀ , ಓಂ ಪಿನಾಕಧಾರಿಣ್ಯೈ ನಮಃ**

ಶಕ್ತಿ ಶಾಲಿನಿಯಾಗಿ ಕೈಗಳಲ್ಲಿ ಬಿಲ್ಲನ್ನು ಹಿಡಿದು ಶತ್ರುಮರ್ದನ ಮಾಡುವ ದೇವಿಗೆ ನಮಸ್ಕಾರಗಳು.

**13. ಚಿತ್ರಾ, ಓಂ ಚಿತ್ರಾಯೈ ನಮಃ**

ಉತ್ತಮ ಜ್ಞಾನದಾಯಿನಿಯೆ, ಚಿತ್ತವನ್ನು ಪವಿತ್ರವಾದಜ್ಞಾನದತ್ತ ಕೊಂಡೊಯ್ಯುವವಳೆ, ಶುದ್ಧಸ್ವರೂಪಳೆ, ಗಗನಸದೃಶಳೆ, ಕಾವ್ಯಸ್ವರೂಪಳೆ ನಿನಗೆ ನಮಸ್ಕಾರಗಳು.

**14. ಚಂಡಘಂಟಾ, ಓಂ ಚಂಡಘಂಟಾಯೈ ನಮಃ**

ಮಹಾಕೋಪಿಷ್ಠೆಯಾಗಿ ಶತ್ರುಗಳನ್ನು ಮರ್ದನಮಾಡತಕ್ಕವಳೆ, ಮಹಾ ಪರಾಕ್ರಮಶಾಲಿನಿಯೂ, ನಿನ್ನ ಘಂಟಾನಾದದಿಂದಲೇ ಶತ್ರುಗಳನ್ನು ನಾಶಮಾಡ ತಕ್ಕವಳೆ ನಿನಗೆ ನಮಸ್ಕಾರಗಳು.

**15. ಮಹಾತಪಾ , ಓಂ ಮಹಾತಪಾಯೈ ನಮಃ**

ಮಹಾ ತಪಸ್ಸಿನಿಂದ ನಿನ್ನ ಕೀರ್ತಿಯನ್ನು ಅರಿಯಬಲ್ಲಂತಹ ಅದ್ಭುತ ಶಕ್ತಿಯನ್ನು ಪಡೆದಿರುವ ಮಹಾ ದೇವಿಯೆ ನಿನಗೆ ನಮಸ್ಕಾರಗಳು.

**16. ಮನಃ , ಓಂ ಮನಸೇ ನಮಃ**

ಭಕ್ತರ ಮನಸ್ಸಿನಲ್ಲಿ ನೆಲೆಸುವಂತಹ, ನೆಲೆಸಿದ ಸ್ಥಳದಲ್ಲಿ ಸರ್ವ ಸಂಪದವನ್ನೂ

ಒದಗಿಸುವ ಮಹಾಶಕ್ತಿಯೆ ನಿನಗೆ ನಮಸ್ಕಾರಗಳು.

**17.ಬುದ್ಧಿ ಓಂ ಬುಧ್ಯೈನಮಃ**

ಬೋಧಿ ಶಕ್ತಿಯಾಗಿರುವ ದೇವಿಗೆ ನಮಸ್ಕಾರಗಳು

**18. ಅಹಂಕಾರಾ - ಓಂ ಅಹಂಕಾರಾಯೈ ನಮಃ**

ಸಂಸಾರದಸರ್ವ ಬಂಧನದಿಂದ ಬಿಡುಗಡೆ ಹೊಂದುವ ಜ್ಞಾನಿಗಳಿಗೆ ಆಶ್ರಯ ದಾತಳಾಗಿ ಅವರಿಗೆ ಸರ್ವಶಕ್ತಿಯನ್ನು ಇತ್ತು, ಸಂಸಾರಬಂಧನದಿಂದ ಬಿಡುಗಡೆ ನೀಡುವ ಶಕ್ತಿರೂಪಿಣಿಯೆ ನಿನಗೆ ನಮಸ್ಕಾರಗಳು.

**19. ಚಿತ್ತರೂಪಾ, ಓಂ ಚಿತ್ತರೂಪಾಯೈ ನಮಃ**

ಭಕ್ತರು ಧ್ಯಾನಿಸುವ ರೂಪಿನಲ್ಲಿ ಅವರಿಗೆ ದರ್ಶನವಿತ್ತು ಅವರವರ ಬಯಕೆಗಳನ್ನು ನೆರವೇರಿಸುವ ದೇವಿಯೆ ನಿನಗೆ ನಮಸ್ಕಾರಗಳು.

**20. ಚಿತಾ, ಓಂ ಚಿತಾಯೈ ನಮಃ**

ದುಷ್ಟಶಕ್ತಿ ಸಂಹಾರಕಳೆ ನಿನಗೆ ನಮಸ್ಕಾರಗಳು.

**21. ಚಿತಿಃ - ಓಂ ಚಿತ್ಯೈ ನಮಃ**

ಜ್ಞಾನಪ್ರಚೋದಕಳೆ, ಜೀವನ್ಮುಕ್ತಿಗೆ ಬೇಕಾದ ಮಾರ್ಗವನ್ನೂ ತೋರುವವಳೆ, ಬುದ್ಧಿ ಸ್ವರೂಪಳೆ, ಶುದ್ಧ ಜ್ಞಾನಸ್ವರೂಪಳೆ ನಿನಗೆ ನಮಸ್ಕಾರಗಳು.

**ಸರ್ವಮಂತ್ರಮಯೀ ಸತ್ತಾ ಸತ್ಯಾನಂದ ಸ್ವರೂಪಿಣೀ |**
**ಅನಂತಾ ಭಾವಿನೀ ಭಾವ್ಯಾ ಭವ್ಯಾಭವ್ಯ ಸದಾಗತಿಃ**
***ಸರ್ವ ಮಂತ್ರ ಮಯಿ, ಸತ್ತಾ, ಸತ್ಯಾನಂದ ಸ್ವರೂಪಿಣೀ***
***ಅನಂತಾ, ಭವಾನೀ, ಭಾವ್ಯಾ, ಭವ್ಯಾ ಅಭವ್ಯಾ, ಸದಾಗತಿಃ||*** **||೪||**

**22 ಸರ್ವಮಂತ್ರಮಯೀ, ಓಂ ಸರ್ವ ಮಂತ್ರಮಯ್ಯೈ ನಮಃ**

ಸರ್ವಮಂತ್ರಗಳಿಂದಲೂ ಸ್ತುತಿಸಲ್ಪಡುವವಳೂ, ಸರ್ವಮಂತ್ರಸ್ವರೂಪಳೂ, ಸರ್ವಮಂತ್ರದ ಸ್ತುತಿಪ್ರಿಯಳೂ ಆದ ದೇವಿಗೆ ನಮಸ್ಕಾರಗಳು.

**23. ಸತ್ತಾ, ಓಂ ಸತ್ತಾಯೈ ನಮಃ**

ಸರ್ವವಸ್ತುಗಳಲ್ಲಿಯೂ ಗೋಚರಿಸುವವಳೂ, ಉತ್ತಮಗುಣಗಳ ಆಗರವೂ, ಆದ, ಸ್ಥಿರಳಾದ, ಶಾಶ್ವತಳೂ ಆದ ದೇವಿಗೆ ನಮಸ್ಕಾರಗಳು.

**24. ಸತ್ಯಾನಂದಸ್ವರೂಪಿಣೀ - ಓಂ ಸತ್ಯಾನಂದಸ್ವರೂಪಿಣ್ಯೈ ನಮಃ**

ಶಾಶ್ವತವಾದುದು ಸತ್ಯ, ಅದರ ಅನುಭವದಿಂದ ದೊರೆಯುವುದು ಶಾಶ್ವತವಾದ ಆನಂದ, ಆ ಆನಂದದಿಂದ ದೊರೆಯುವುದು ಜೀವನ್ಮುಕ್ತಿ, ಅಂತಹ ಜೀವನ್ಮುಕ್ತಿಯನ್ನು ಅನುಗ್ರಹಿಸುವ ದೇವಿಗೆ ನಮಸ್ಕಾರಗಳು.

**25.** ಅನಂತಾ, ಓಂ ಅನಂತಾಯೈ ನಮಃ

ಯಾರ ಅಳತೆಯನ್ನು ವರ್ಣಿಸಲಾಗದೋ, ಯಾರಿಗೆ ಆದಿ, ಅಂತ್ಯಗಳಿಲ್ಲವೋ, ಯಾವ ಸ್ತುತಿಯನ್ನು ಮಾಡಿ ಮುಗಿಸಲಾಗದೋ, ಯಾರ ಶಕ್ತಿಯನ್ನು ಅಳೆಯಲಾಗದೋ ಅಂತಹ ಅನಂತ ಶಕ್ತಿ ರೂಪಣಿಗೆ ನಮಸ್ಕಾರಗಳು.

**26.** ಭಾವಿನೀ, ಓಂ ಭಾವಿನ್ಯೈ ನಮಃ

ಸರ್ವಸೃಷ್ಟಿಕಾರಕಳೇ, ಶುದ್ಧಜ್ಞಾನದಿಂದ ಅರಿಯಬಲ್ಲವಳೆ, ಜ್ಞಾನದ ಮುಖಾಂತರ ನನ್ನ ಇರುವಿಕೆಯನ್ನು ವ್ಯಕ್ತಪಡಿಸುವವಳೆ, ಶ್ರುತಿಸ್ಮೃತಿಪುರಾಣಗಳಿಂದ ಗ್ರಹಿಸಬಲ್ಲವಳೆ ನಿನಗೆ ನಮಸ್ಕಾರಗಳು.

**27.** ಭಾವ್ಯಾ , ಓಂ ಭಾವ್ಯಾಯೈ ನಮಃ

ಭವಿಷ್ಯವನ್ನು ರೂಪಿಸುವವಳೆ, ಭಕ್ತರು ಬೇಡಿದುದನ್ನು ಅವರ ಬೇಡಿಕೆಯಂತೆ ಪೂರೈಸುವವಳೆ, ನಿನಗೆ ನಮಸ್ಕಾರಗಳು.

**28.** ಭವ್ಯಾ, ಓಂ ಭವ್ಯಾಯೈ ನಮಃ

ಶಾಶ್ವತಳೆ, ಪೂಜಿಸಲು ಅರ್ಹಳಾದವಳೆ, ಸುಂದರಳೆ, ಫಲಾಫಲಗಳನ್ನು ನೀಡುವವಳೆ, ಪಾರ್ವತಿಯಸ್ವರೂಪಳೆ, ವರ ಪ್ರದಾಯಿನಿಯೆ, ನಿನಗೆ ನಮಸ್ಕಾರಗಳು.

**29.** ಅಭವ್ಯಾ, ಓಂ ಅಭವ್ಯಾಯೈ ನಮಃ

ನಿನಗಿಂತ ಹಿರಿಯರು, ಫಲವನ್ನು ನೀಡುವವರೂ, ನಿನಗಿಂತ ಬಲಯುತರು, ನಿನಗಿಂತ ಕರುಣಾಮಯರೂ ಇಲ್ಲದಂತಹ ದೇವಿಯೆ ನಿನಗೆ ನಮಸ್ಕಾರಗಳು.

**30.** ಸದಾಗತಿಃ, ಓಂ ಸದಾಗತ್ಯೈ ನಮಃ

ಭಕ್ತರ ಬೇಡಿಕೆಗಳನ್ನು ಈಡೇರಿಸಿ, ಸದಾ ಅವರಿಂದ ಪೂಜೆ ಕೈಗೊಳ್ಳುವವಳೇ, ನಿನ್ನನ್ನೇ ಗತಿ ಎಂದು ನಂಬಿದವರನ್ನು ಉದ್ಧರಿಸುವವಳೆ ನಿನಗೆ ನಮಸ್ಕಾರಗಳು.

ಶಾಂಭವೀ ದೇವಮಾತಾ ಚ ಚಿಂತಾ ರತ್ನಪ್ರಿಯಾ ಸದಾ |
ಸರ್ವವಿದ್ಯಾ ದಕ್ಷಕನ್ಯಾ ದಕ್ಷಯಜ್ಞವಿನಾಶಿನೀ || ||೫||
*ಶಾಂಭವೀ ದೇವ ಮಾತಾ ಚಿಂತಾ ರತ್ನ ಪ್ರಿಯಾ |*
*ಸರ್ವವಿದ್ಯಾ ದಕ್ಷಕನ್ಯಾ ದಕ್ಷ ಯಜ್ಞವಿನಾಶಿನೀ ||*

**31.** ಶಾಂಭವೀ - ಓಂ ಶಾಂಭವ್ಯೈ ನಮಃ

ಶಂಕರಪ್ರಿಯಭಾಮಿನಿಯೆ, ನೀಲಿಯ ದೂರ್ವದಿಂದ ಪೂಜಿಸಲ್ಪಡುವವಳೇ, ಬೇಡಿದುದನ್ನು ಬೇಡಿದವರಿಗೆ ನೀಡುವವಳೆ, ನಿನಗೆ ನಮಸ್ಕಾರಗಳು.

**32. ದೇವಮಾತಾ, ಓಂ ದೇವಮಾತ್ರೇ ನಮಃ**

ಸರ್ವದೇವತೆಗಳಿಗೂ ಮಾತೃರೂಪಳಾಗಿ, ಅವರನ್ನು ಕಷ್ಟದಿಂದ ಬಿಡುಗಡೆಮಾಡಿ ಅವರಿಗೆ ಸಂತಸವನ್ನು ನೀಡಿದ್ದವಳೇ, ಸಕಲ ದೇವತೆಗಳ ಆದಿಮೂಲವಾಗಿರುವ ದೇವಿಯೆ ನಿನಗೆ ನಮಸ್ಕಾರಗಳು.

**33. ಚಿಂತಾ, ಓಂ ಚಿಂತಾಯೈ ನಮಃ**

ಧ್ಯಾನಮಗ್ನರಾಗಿರುವವರು ತಮ್ಮ ಚಿಂತನೆಯಿಂದ ಗ್ರಹಿಸಬಲ್ಲವಳೆ, ಯೋಗಿಗಳೂ, ತಪಸ್ವಿಗಳೂ, ನಿನ್ನ ಇರುವಿಕೆಯನ್ನು ಅರಿಯಲು ಧ್ಯಾನಮಾಡುವಂತೆ ಮಾಡುವವಳೆ ನಿನಗೆ ನಮಸ್ಕಾರಗಳು.

**34. ರತ್ನಪ್ರಿಯಾ, ಓಂ ರತ್ನಪ್ರಿಯಾಯೈ ನಮಃ**

ಮುತ್ತು, ರತ್ನ, ಮತ್ತು ಹವಳಗಳಿಂದ ಪರಿಶೋಭಿಸುವ ಆಭರಣಗಳನ್ನು ಧರಿಸಿರುವವಳೆ ಭಕ್ತರು ನೀಡಿದುದನ್ನು ಪರಿಗ್ರಹಿಸುವವಳೆ, ನಿನಗೆ ನಮಸ್ಕಾರಗಳು.

**35. ಸರ್ವವಿದ್ಯಾ, ಓಂ ಸರ್ವವಿದ್ಯಾಯೈ ನಮಃ**

ಸರ್ವವನ್ನೂ ಅರಿತಿರುವವಳೆ, ಸರ್ವವಿದ್ಯೆಯ ಆದಿದೇವತೆಯೆ, ಸರ್ವ ಜ್ಞಾನದ ಮೂಲಸ್ವರೂಪಳೆ, ನಿನಗೆ ನಮಸ್ಕಾರಗಳು.

**36. ದಕ್ಷಕನ್ಯಾ, ಓಂ ದಕ್ಷಕನ್ಯಾಯೈ ನಮಃ**

ದಕ್ಷಬ್ರಹ್ಮನ ಮಗಳಾಗಿ ಜನಿಸಿ, ದಕ್ಷಯಜ್ಞಧ್ವಂಸಿನಿಯಾಗಿ ಲೋಕದ ಎಲ್ಲೆಡೆ ನೆಲೆಸಿರುವ ದೇವಿಯೆ ನಿನಗೆ ನಮಸ್ಕಾರಗಳು.

**37. ದಕ್ಷಯಜ್ಞವಿನಾಶಿನೀ, ಓಂ ದಕ್ಷಯಜ್ಞವಿನಾಶಿನ್ಯೈ ನಮಃ**

ದಕ್ಷಯಜ್ಞದಲ್ಲಿ ಸ್ವಯಂ ಆಹುತಿಯಾಗಿ ಅದರಿಂದ ಪ್ರಚಂಡ ತಾಂಡವದಿಂದ ಲೋಕೋದ್ಧಾರ ಮಾಡಿದ ಅಹಂಕಾರವೆಂಬ ದಕ್ಷಯಜ್ಞವನ್ನು ಧ್ವಂಸಮಾಡಿದ ದಾಕ್ಷಾಯಣಿಯೆ ನಿನಗೆ ನಮಸ್ಕಾರಗಳು:

**ಅಪರ್ಣಾನೇಕವರ್ಣಾ ಚ ಪಾಟಲಾ ಪಾಟಲಾವತೀ |**
**ಪಟ್ಟಾಂಬರಪರೀಧಾನಾ ಕಲಮಂಜೀರರಂಜಿನೀ ||** ||೬||

*ಅಪರ್ಣಾ ಅನೇಕ ವರ್ಣಾ ಪಾಟಲಾ ಪಾಟಲಾವತೀ*
*ಪಟ್ಟಾಂಬರಪರೀಧಾನಾ ಕಲಮಂಜೀರರಂಜಿನೀ*

**38. ಅಪರ್ಣಾ, ಓಂ ಅಪರ್ಣಾಯೈ ನಮಃ**

ಕಠಿಣವಾದ ತಪಸ್ಸನ್ನು ಮಾಡುವ ಸಮಯದಲ್ಲಿ ಒಣಗಿದ ಎಲೆಗಳನ್ನೂ ಸಹ ಸೇವಿಸದೇ ತಪಸ್ಸನ್ನು ಮಾಡುವ ಶಕ್ತಿಯನ್ನು ಪಡೆದಿರುವಂತಹ ದೇವಿಗೆ ನಮಸ್ಕಾರಗಳು.

**39.** ಅನೇಕವರ್ಣಾ, ಓಂ ಅನೇಕವರ್ಣಾಯೈ ನಮಃ

ಯಾವಾಗ ಹೇಗೆ ಬೇಕಾದರೂ ಯಾವ ರೂಪವನ್ನಾದರೂ ಧರಿಸಿ, ಸ್ವಯಂಭೂವಾಗಿ ಲೋಕವನ್ನು ಉದ್ಧಾರಮಾಡುವ ದೇವಿಗೆ ನಮಸ್ಕಾರಗಳು.

**40.** ಪಾಟಲಾ, ಓಂ ಪಾಟಲಾಯೈ ನಮಃ

ಪಾಟಲ ಪುಷ್ಪ ಪ್ರಿಯಳಿಗೆ ನಮಸ್ಕಾರಗಳು (ಪಾಟಲಪುಷ್ಪಕಹಳೆಯ ಆಕಾರದಲ್ಲಿರುವ ಸುಂದರ ಪುಷ್ಪ, - ಸಮರ ಕಾಲದಲ್ಲಿ ಕಹಳೆ ನಿನಾದದಿಂದ ಜಾಗೃತಳಾಗುವವಳು, ಸಂತೋಷಿಸುವವಳು ಎಂದೂ ಅರ್ಥವಾಗುತ್ತದೆ)

**41**.ಪಾಟಲಾವತೀ, ಓಂ ಪಾಟಲಾವತ್ಯೈ ನಮಃ

ಸದಾಕಾಲದಲ್ಲಿಯೂ ಗುಲಾಬಿ ಮೊದಲಾದ ಕೆಂಪುಹೂವುಗಳನ್ನು ಧರಿಸಲು ಆಶಿಸುವ ದೇವಿಗೆ ನಮಸ್ಕಾರಗಳು.

**42.** ಪಟ್ಟಾಂಬರಪರೀಧಾನಾ, ಓಂ ಪಟ್ಟಾಂಬರ ಪರೀಧಾನಾಯೈ ನಮಃ

ಚಂದದ ರೇಷ್ಮೆ ವಸ್ತ್ರಗಳನ್ನು ಉಡುವುದರಲ್ಲಿ ಆಸಕ್ತಿವಹಿಸಿರುವಳೆ, ಸದಾಕಾಲ ರೇಷ್ಮೆಯ ಉಡುಗೆಯಲ್ಲಿ ಸಂತೋಷಿಸುವವಳೂ, ಆದ ದೇವಿಗೆ ನಮಸ್ಕಾರಗಳು.

**43.** ಕಲಮಂಜೀರರಂಜಿನಿ, ಓಂ ಕಲಮಂಜೀರರಂಜಿನ್ಯೈ ನಮಃ

ಮಧುರವಾದ ಧ್ವನಿಯನ್ನು ಉಂಟುಮಾಡುವ ತಿಲಕವೆಂಬ ಹೂಗೊಂಚಲಿನ ಮಾಲೆಯನ್ನು ಧರಿಸಿ ಸಂತೋಷಪಡುವ ದೇವಿಗೆ ನಮಸ್ಕಾರಗಳು.

ಅಮೆಯಾವಿಕ್ರಮಾ ಕ್ರೂರಾ ಸುಂದರೀ ಸುರಸುಂದರಿ |
ವನದುರ್ಗಾ ಚ ಮಾತಂಗೀ ಮತಂಗಮುನಿಪೂಜಿತಾ ||
*ಅಮೇಯವಿಕ್ರಮಾ ಕ್ರೂರಾ ಸುಂದರೀ ಸುರಸುಂದರಿ |*
*ವನದುರ್ಗಾ ಮಾತಂಗೀ ಮತಂಗಮುನಿಪೂಜಿತಾ ||* ||೭||

**44.** ಅಮೇಯವಿಕ್ರಮಾ - ಅಮೇಯವಿಕ್ರಮಾಯೈ ನಮಃ

ಅತ್ಯಂತ ಪರಾಕ್ರಮ ಶಾಲಿನಿಯಾದ ದೇವಿಗೆ ನಮಸ್ಕಾರಗಳು.

**45.** ಕ್ರೂರಾ, ಓಂ ಕ್ರೂರಾಯೈ ನಮಃ

ಶಕ್ತಿಗಳ ಮರ್ದನಕಾಲದಲ್ಲಿಯೂ, ಅನಿಷ್ಟಗಳನ್ನು ದೂರ ಮಾಡುವಾಗಲೂ ಬಹಳ ಕ್ರೂರಳಾಗಿ ನಡೆದುಕೊಳ್ಳುವ ದೇವಿಗೆ ನಮಸ್ಕಾರಗಳು.

**46.**ಸುಂದರೀ, ಓಂ ಸುಂದರ್ಯೈ ನಮಃ

ಲೋಕಸುಂದರಿಯಾದ ದೇವಿಗೆ ನಮಸ್ಕಾರಗಳು (ಲೋಕವೆಲ್ಲವೂ ಅವಳ ರೂಪವೇ, ಸರ್ವಭೂತಗಳು ಅವಳ ರೂಪವೇ, ಆದುದರಿಂದ ಅವಳ ರೂಪ ಸೌಂದರ್ಯವೇ ಮೈವೆತ್ತಿನಿಂತಿಹುದು. ಅದ್ವೈತತತ್ತ್ವದ ಪರಾಕಾಷ್ಠೆಯನ್ನು

ಗ್ರಹಿಸಬಹುದು).

**47. ಸುರಸುಂದರೀ, ಓಂ ಸುರಸುಂದರ್ಯೈ ನಮಃ**

ದೇವತೆಗಳ ಮಧ್ಯದಲ್ಲಿ ಬಹು ಸುಂದರವಾಗಿ ಕಾಣುವ ದೇವಿಗೆ ನಮಸ್ಕಾರಗಳು.

**48. ವನದುರ್ಗಾ - ಓಂ ವನದುರ್ಗಾಯೈನಮಃ**

ದಟ್ಟಕಾನನಗಳಲ್ಲಿಯೂ ಶಕ್ತಿಶಾಲಿಯಾಗಿ ಸಂಚರಿಸುವ ದೇವಿಗೆ ನಮಸ್ಕಾರಗಳು.

**49.ಮಾತಂಗೀ - ಓಂ ಮಾತಂಗ್ಯೈ ನಮಃ**

ಆನೆಯಂತೆ ಘನ ಗಂಭೀರ ರೂಪಳೇ, ಶತ್ರುಮರ್ದನ ಸಮಯದಲ್ಲಿ ಅತ್ಯಂತ ಸಹಿಸಲಾರದ,ಕೆಲಸಗಳನ್ನೂ ಮಾಡಿ ಶತ್ರುಮರ್ದನ ಮಾಡುವವಳೆ ನಿನಗೆ ನಮಸ್ಕಾರಗಳು.

**50.ಮತಂಗಮುನಿಪೂಜಿತಾ, ಓಂ ಮತಂಗಮುನಿಪೂಜಿತಾಯೈ ನಮಃ**

ಮತಂಗಮುನಿಗಳಿಂದ ಪೂಜಿತಳಾಗಿರುವವಳೆ ನಿನಗೆ ನಮಸ್ಕಾರಗಳು. (ಮತಂಗ ಮುನಿಗಳು ಬಹು ತಪಸ್ಸಿನಿಂದ ದೇವತೆಗಳನ್ನು ಮೆಚ್ಚಿಸಿದವರು. ಅವರು ಹಾಗೆ ತಪಗೈಯಲು ಕಾರಣಳಾದ ದೇವಿ, ಕರುಣಾಮಯಿ ಸರ್ವರ ರಕ್ಷಕಳು.)

**ಬ್ರಾಹ್ಮೀ ಮಾಹೇಶ್ವರೀ ಚೈಂದ್ರೀ ಕೌಮಾರೀ ವೈಷ್ಣವೀ ತಥಾ**
**ಚಾಮುಂಡಾ ಚೈವ ವಾರಾಹೀ ಲಕ್ಷ್ಮೀಶ್ಚ ಪುರುಷಾಕೃತಿಃ ||** ||೮||
*ಬ್ರಾಹ್ಮೀ ಮಾಹೇಶ್ವರೀ ಐಂದ್ರೀ ಕೌಮಾರೀ ವೈಷ್ಣವೀ*
*ಚಾಮುಂಡಾ ವಾರಾಹೀ ಲಕ್ಷ್ಮೀ ಪುರುಷಾಕೃತಿಃ*

**51. ಬ್ರಾಹ್ಮೀ, ಓಂ ಬ್ರಾಹ್ಮ್ಯೈ ನಮಃ**

ಬ್ರಹ್ಮನ ಅಂಶವಾದ ಬ್ರಾಹ್ಮೀ ರೂಪಿನಿಂದ ಅವತರಿಸಿ ಶತ್ರುಗಳನ್ನು ಮರ್ದನ ಮಾಡಿದ ದೇವಿಗೆ ನಮಸ್ಕಾರಗಳು.

**52. ಮಾಹೇಶ್ವರೀ, ಓಂ ಮಾಹೇಶ್ವರ್ಯೈ ನಮಃ**

ಪರಮೇಶ್ವರನ ಅಂಶವಾದ ಮಾಹೇಶ್ವರಿಯ ರೂಪಿನಿಂದ ಶತ್ರುಗಳನ್ನು ಧ್ವಂಸಮಾಡಿದ ದೇವಿಗೆ ನಮಸ್ಕಾರಗಳು.

**53. ಐಂದ್ರೀ, ಓಂ ಐಂದ್ರ್ಯೈ ನಮಃ**

ಇಂದ್ರನ ಅಂಶದಿಂದ ಇಂದ್ರಾಣಿಯಾಗಿ ಮೆರೆದು ಶತ್ರುಗಳನ್ನು ಧ್ವಂಸಮಾಡಿದ ದೇವಿಗೆ ನಮಸ್ಕಾರಗಳು.

**54. ಕೌಮಾರೀ, ಓಂ ಕೌಮಾರ್ಯೈ ನಮಃ**

ಕುಮಾರಸ್ವಾಮಿಯ ಅಂಶದಿಂದ ಕೌಮಾರಿಯಾಗಿ ಬೆಳಗಿದ ದೇವಿಗೆ ನಮಸ್ಕಾರಗಳು.

**55**. ವೈಷ್ಣವೀ, ಓಂ ವೈಷ್ಣವ್ಯೈ ನಮಃ

ವಿಷ್ಣುವಿನ ಅಂಶದಿಂದ ವೈಷ್ಣವಿಯಾಗಿ ಅವತರಿಸಿ ಶತ್ರುಗಳನ್ನು ಸಂಹಾರ ಮಾಡಿದ ವೈಷ್ಣವಿಗೆ ನಮಸ್ಕಾರಗಳು.

**56**.ಚಾಮುಂಡಾ, ಓಂ ಚಾಮುಂಡಾಯೈ ನಮಃ

ಚಂಡಮುಂಡರೆಂಬ ಬಹು ಭಯಂಕರರಾದ ರಾಕ್ಷಸರನ್ನು ಚಂಡಾಡಿದ ಚಾಮುಂಡಾಂಬಿಕೆಗೆ ನಮಸ್ಕಾರಗಳು.

**57**. ವಾರಾಹೀ. ಓಂ ವಾರಾಹ್ಯೈ ನಮಃ

ವಿಷ್ಣು ಶಕ್ತಿಯಿಂದ ವರಾಹರೂಪಿನಿಂದ ಅವತರಿಸಿ ಭೂಮಂಡಲವನ್ನು ರಕ್ಷಿಸಿ ರಾಕ್ಷಸಸೈನ್ಯವನ್ನು ವರಾಹರೂಪಿನಿಂದ ಧ್ವಂಸಗೊಳಿಸಿದ ದೇವಿಗೆ ನಮಸ್ಕಾರಗಳು.

**58**. ಲಕ್ಷ್ಮೀಃ, ಓಂ ಲಕ್ಷ್ಮ್ಯೈ ನಮಃ

ಸಕಲಸೌಭಾಗ್ಯಗಳನ್ನು ಕೊಡುವ ಮಹಾಲಕ್ಷ್ಮಿಗೆ ನಮಸ್ಕಾರಗಳು.

**59**. ಪುರುಷಾಕೃತಿಃ, ಓಂ ಪುರುಷಾಕೃತ್ಯೈ ನಮಃ

ಸರ್ವಜೀವಾತ್ಮಗಳಲ್ಲಿ ಪುರುಷರೂಪಿನಿಂದ ರೂಪುಗೊಂಡರೂ ಅಂತರಾತ್ಮದಲ್ಲಿ ಸ್ತ್ರೀಶಕ್ತಿಯಾಗಿ ಕೆಲಸ ಮಾಡುವ ದೇವಿಗೆ ನಮಸ್ಕಾರಗಳು (ಬುದ್ಧಿ ಸರಸ್ವತಿ ಧೈರ್ಯ- ಧೈರ್ಯಲಕ್ಷ್ಮೀ, ಹಣ- ಧನಲಕ್ಷ್ಮೀ, ಇತ್ಯಾದಿ).

ವಿಮಲೋತ್ಕರ್ಷಿಣೀ ಜ್ಞಾನಾ ಕ್ರಿಯಾ ನಿತ್ಯಾ ಚ ಬುದ್ಧಿದಾ |
ಬಹುಲಾ ಬಹುಲಪ್ರೇಮಾ ಸರ್ವವಾಹನವಾಹನಾ || ||೯||
*ವಿಮಲಾ ಉತ್ಕರ್ಷಿಣೀ ಜ್ಞಾನಾ ಕ್ರಿಯಾ ನಿತ್ಯಾ ಬುದ್ಧಿದಾ |*
*ಬಹುಲಾ ಬಹುಲಪ್ರೇಮಾ ಸರ್ವವಾಹನವಾಹನಾ ||*

**60**. ವಿಮಲಾ, ಓಂ ವಿಮಾಲಾಯೈ ನಮಃ

ರುದ್ರಸ್ವರೂಪಳಾದ ದೇವಿಗೆ ನಮಸ್ಕಾರಗಳು.

**61**. ಉತ್ಕರ್ಷಿಣೀ - ಓಂ ಉತ್ಕರ್ಷಿಣ್ಯೈ ನಮಃ

ಜ್ಞಾನಿಗಳಿಗೂ ತಪಸ್ವಿಗಳಿಗೂ, ನಿನ್ನ ಕುರಿತು ಧ್ಯಾನಮಾಡುವವರಿಗೂ ಶುಭವನ್ನು ನೀಡಿ ಅವರನ್ನು ಮೋಕ್ಷಪಡೆವವರಾಗಿ ಮಾಡುವಂತಹ ಕರುಣಾಮಯಿಗೆ ನಮಸ್ಕಾರಗಳು.

**62**. ಜ್ಞಾನಾ, ಓಂ ಜ್ಞಾನಾಯೈ ನಮಃ

ಜ್ಞಾನಸ್ವರೂಪಿಯಾದ ದೇವಿಗೆ ನಮಸ್ಕಾರಗಳು.

63. ಕ್ರಿಯಾ, ಓಂ ಕ್ರಿಯಾಯೈ ನಮಃ

ಸರ್ವಕಾರ್ಯಗಳೂ ದೇವಿಯ ಕ್ರಿಯೆಯೇ ಆಗಿದೆ. ಅಂತಹ ಕ್ರಿಯಾಶಕ್ತಿಯಾದ ದೇವಿಗೆ ನಮಸ್ಕಾರಗಳು.

64. ನಿತ್ಯಾ, ಓಂ ನಿತ್ಯಾಯೈ ನಮಃ

ದೇವಿಯು ಶಾಶ್ವತಳು ಅಂತಹ ಶಾಶ್ವತಶಕ್ತಿಗೆ ನಮಸ್ಕಾರಗಳು

65. ಬುದ್ಧಿದಾ, ಓಂ ಬುದ್ಧಿದಾಯೈ ನಮಃ

ನಮ್ಮ ಬುದ್ಧಿಯನ್ನು ಪ್ರಚೋದಿಸುವವಳಾದ ದೇವಿಗೆ ನಮಸ್ಕಾರಗಳು.

66. ಬಹುಲಾ, ಓಂ ಬಹುಲಾಯೈ ನಮಃ

ಬಹುರೂಪವನ್ನು ಧರಿಸಿ ಶತ್ರುಗಳನ್ನು ಸಂಹರಿಸಿ ಲೋಕವನ್ನು ಉದ್ಧರಿಸುವಂತಹ ದೇವಿಗೆ ನಮಸ್ಕಾರಗಳು.

67. ಬಹುಲಪ್ರೇಮಾ, ಓಂ ಬಹುಲಪ್ರೇಮಾಯೈ ನಮಃ

ಯಾವ ಯಾವ ಭಕ್ತರು ಯಾವ ಯಾವ ರೀತಿಯಲ್ಲಿ ಬೇಡುವರೋ, ಅವರವರ ಬಯಕೆಗೆ ತಕ್ಕಂತೆ ಪ್ರೀತಿಯಿಂದ ಅದನ್ನು ಒದಗಿಸುವ ದೇವಿಗೆ ನಮಸ್ಕಾರಗಳು.

68. ಸರ್ವವಾಹನವಾಹನಾ, ಓಂ ಸರ್ವವಾಹನವಾಹನಾಯೈನಮಃ

ಸರ್ವವಾಹನಗಳನ್ನು ವಾಹನವಾಗಿ ಉಪಯೋಗಿಸಬಲ್ಲಂತಹ ದೇವಿಗೆ ನಮಸ್ಕಾರಗಳು.

ನಿಶುಂಭಶುಂಭಹನನೀ ಮಹಿಷಾಸುರಮರ್ದಿನೀ |
ಮಧುಕೈಟಭಹಂತ್ರೀ ಚ ಚಂಡಮುಂಡವಿನಾಶಿನೀ || ||೧೦||

*ನಿಶುಂಭಶುಂಭಹನನೀ ಮಹಿಷಾಸುರಮರ್ದಿನೀ*
*ಮಧುಕೈಟಭಹಂತ್ರೀ ಚಂಡಮುಂಡ ವಿನಾಶಿನೀ.*

69. ನಿಶುಂಭಶುಂಭಹನನೀ, ಓಂ ನಿಶುಂಭಶುಂಭಹನನ್ಯೈ ನಮಃ

ನಿಶುಂಭ ಮತ್ತು ಶುಂಭರೆಂಬ ಮಹಾರಾಕ್ಷಸರನ್ನು ಸಂಹಾರ ಮಾಡಿದ ದೇವಿಗೆ ನಮಸ್ಕಾರಗಳು.

70. ಮಹಿಷಾಸುರಮರ್ದಿನೀ, ಓಂ ಮಹಿಷಾಸುರಮರ್ದಿನ್ಯೈ ನಮಃ

ಮಹಿಷಾಸುರನೆಂಬ ರಾಕ್ಷಸನನ್ನು ಸಂಹಾರಮಾಡಿದ ದೇವಿಗೆ ನಮಸ್ಕಾರಗಳು.

71. ಮಧುಕೈಟಭಹಂತ್ರೀ - ಓಂ ಮಧುಕೈಟಭಹಂತ್ರ್ಯೈ ನಮಃ

ಮಧು ಮತ್ತು ಕೈಟಭರೆಂಬ ರಾಕ್ಷಸರನ್ನು ಸಂಹರಿಸಿದ ದೇವಿಗೆ ನಮಸ್ಕಾರಗಳು.

**72.ಚಂಡಮುಂಡವಿನಾಶಿನೀ, ಓಂ ಚಂಡಮುಂಡವಿನಾಶಿನ್ಯೈ ನಮಃ**

ಚಂಡ ಮುಂಡರೆಂಬ ರಾಕ್ಷಸರನ್ನು ವಧಿಸಿ ಚಾಮುಂಡಾ ಎಂದು ಖ್ಯಾತಳಾದ ದೇವಿಗೆ ನಮಸ್ಕಾರಗಳು.

**ಸರ್ವಾಸುರವಿನಾಶಾ ಚ ಸರ್ವದಾನವಘಾತಿನೀ |**
**ಸರ್ವಶಾಸ್ತ್ರಮಯೀ ಸತ್ಯಾ ಸರ್ವಾಸ್ತ್ರಧಾರಿಣೀ ತಥಾ || ||೧೧||**
**ಸರ್ವಾಸುರವಿನಾಶಾ, ಸರ್ವದಾನವಘಾತಿನೀ |**
**ಸರ್ವಶಾಸ್ತ್ರಮಯೀ ಸತ್ಯಾ ಸರ್ವಾಸ್ತ್ರಧಾರಿಣೀ**

**73. ಸರ್ವಾಸುರವಿನಾಶಾ, ಓಂ ಸರ್ವಾಸುರವಿನಾಶಿನ್ಯೈ ನಮಃ**

ಎದುರಿಗೆ ಬಂದ ಯುದ್ಧಾತುರಾದ ಸರ್ವರಾಕ್ಷಸರನ್ನೂ ಸಂಹರಿಸಿದ ದೇವಿಗೆ ನಮಸ್ಕಾರಗಳು.

**74. ಸರ್ವದಾನವಘಾತಿನೀ, ಓಂ ಸರ್ವದಾನವಘಾತಿನ್ಯೈನಮಃ**

ಸಕಲ ರಾಕ್ಷಸರನ್ನು ಘಾತಿ ಗೊಳಿಸಿದ ದೇವಿಗೆ ನಮಸ್ಕಾರಗಳು.

**75.ಸರ್ವಶಾಸ್ತ್ರಮಯೀ - ಓಂ ಸರ್ವಶಾಸ್ತ್ರಮಯ್ಯೈ ನಮಃ**

ಸರ್ವಶಾಸ್ತ್ರವಿಶಾರದೆಯಾದ ದೇವಿಗೆ ನಮಸ್ಕಾರಗಳು.

**76. ಸತ್ಯಾ, ಓಂ ಸತ್ಯಾಯೈ ನಮಃ**

ಯಾವುದು ಸತ್ಯವೋ, ಯಾವುದು ಶಾಶ್ವತವೋ, ಅವೆಲ್ಲವೂ ದೇವೀಮಯ ಅಂತಹ ದೇವಿಗೆ ನಮಸ್ಕಾರಗಳು.

**77. ಸರ್ವಾಸ್ತ್ರಧಾರಿಣೀ, ಓಂ ಸರ್ವಾಸ್ತ್ರಧಾರಿಣ್ಯೈ ನಮಃ**

ಎಲ್ಲಾ ದೇವತೆಗಳಿಂದಲೂ ಅನುಗ್ರಹಿಸಲ್ಪಟ್ಟು ಸರ್ವಅಸ್ತ್ರಗಳನ್ನೂ ಧಾರಣೆ ಮಾಡಿರುವ ದೇವಿಗೆ ನಮಸ್ಕಾರಗಳು.

**ಅನೇಕಶಸ್ತ್ರಹಸ್ತಾ ಚ ಅನೇಕಾಸ್ತ್ರಸ್ಯಧಾರಿಣೀ |**
**ಕುಮಾರೀ ಚೈಕ ಕನ್ಯಾ ಚ ಕಿಶೋರೀ ಯುವತೀಃ ರ್ಯತಿಃ || ||೧೨||**
***ಅನೇಕಶಸ್ತ್ರಹಸ್ತಾ ಅನೇಕಾಸ್ತ್ರಧಾರಿಣೀ***
***ಕುಮಾರೀ ಏಕ ಕನ್ಯಾ, ಕಿಶೋರೀ, ಯುವತೀಃ ಯತಿಃ.***

**78. ಅನೇಕಶಸ್ತ್ರಹಸ್ತಾ - ಓಂ ಅನೇಕಶಸ್ತ್ರಹಸ್ತಾಯೈ ನಮಃ**

ಅಸಂಖ್ಯಾತಶಸ್ತ್ರಗಳನ್ನು ಧರಿಸಲು ಅಸಂಖ್ಯ ಹಸ್ತಗಳಿಂದ ಶೋಭಿತಳಾದ ಸರ್ವಶಸ್ತ್ರಹಸ್ತೆಗೆ ನಮಸ್ಕಾರಗಳು.

**79. ಅನೇಕಾಸ್ತ್ರಧಾರಿಣೀ - ಓಂ ಅನೇಕಾಸ್ತ್ರಧಾರಿಣ್ಯೈ ನಮಃ**

ಒಂದೇ ಶಕ್ತಿಯಾದ ದೇವಿಯಾದರೂ ಅನೇಕ ಶಕ್ತಿಯ ಅಸ್ತ್ರಗಳನ್ನು ಧರಿಸಿರುವ

ಸರ್ವಶಕ್ತಿಗೆ ನಮಸ್ಕಾರಗಳು.

80. ಕೌಮಾರೀ, ಓಂ ಕೌಮಾರ್ಯೈ ನಮಃ

ಸ್ಕಂದನಅನುಗ್ರಹದಿಂದ ಪಡೆದ ವೇಲಾಯುಧಧಾರಿಣಿಯಾದ ಕೌಮಾರೀ ದೇವಿಗೆ ನಮಸ್ಕಾರಗಳು.

**81.** ಏಕಕನ್ಯಾ, ಓಂ ಏಕಕನ್ಯಾಯೈ ನಮಃ

ಅನೇಕರೂಪಗಳಿಂದ ಪರಿಶೋಭಿತಳಾದರೂ ಏಕ ರೂಪಿಯಾದ ದೇವಿಗೆ ನಮಸ್ಕಾರಗಳು.

**82.** ಕಿಶೋರೀ, ಓಂ ಕಿಶೋರ್ಯೈ ನಮಃ

ಬಹು ಕಾಲದ ಶಕ್ತಿದೇವತೆಯಾದರೂ ಸದಾ ನವಯೌವನೆಯಾಗಿರುವ ದೇವಿಗೆ ನಮಸ್ಕಾರಗಳು.

**83.** ಯುವತಿಃ - ಓಂ ಯುವತ್ಯೈ ನಮಃ

ಭೀಕರರಕ್ಕಸರನ್ನು ಸಂಹಾರಮಾಡಿದ ಮಹಾರುದ್ರಿಣಿಯಾದರೂ ಸದಾ ನಗುಮುಖದಿಂದ ದರ್ಶನವೀಯುವ ಯುವತಿ ದೇವಿಗೆ ನಮಸ್ಕಾರ.

**84.** ಯತಿಃ - ಓಂ ಯತ್ಯೈ ನಮಃ

ಭಾವಗಮ್ಯವಾದ ಯತಿವರೇಣ್ಯರಿಗೆ ಅವರ ಸಾತ್ವಿಕದೃಷ್ಟಿಗೆ ತಕ್ಕಂತೆ ಯತಿಯಂತೆ ದರ್ಶನವೀಯುವ ದೇವಿಗೆ ನಮಸ್ಕಾರಗಳು.

ಅಪ್ರೌಢಾ ಚೈವ ಪ್ರೌಢಾ ಚ ವೃದ್ಧಮಾತಾ ಬಲಪ್ರದಾ |
ಮಹೋದರೀ ಮುಕ್ತಕೇಶೀ ಘೋರರೂಪಾ ಮಹಾಬಲಾ || ||೧೩||

*ಅಪ್ರೌಢಾ ಪ್ರೌಢಾ ವೃದ್ಧಮಾತಾ ಬಲಪ್ರದಾ*
*ಮಹೋದರೀ ಮುಕ್ತಕೇಶೀ ಘೋರರೂಪಾ ಮಹಾಬಲಾ*

**85.** ಅಪ್ರೌಢಾ - ಓಂ ಅಪ್ರೌಢಾಯೈ ನಮಃ

ಸರ್ವಶಾಸ್ತ್ರಕೋವಿದೆಯಾದರೂ, ಸರ್ವಗುಣಮಯಿಯಾದರೂ ಅಹಂಕಾರ ವರ್ಜಿತೆಯಾಗಿ ಹಸುಳೆಯಂತೆ ಮುಗ್ಧಳಾಗಿರುವ ದೇವಿಗೆ ನಮಸ್ಕಾರಗಳು.

**86.** ಪ್ರೌಢಾ - ಓಂ ಪ್ರೌಢಾಯೈ ನಮಃ

ಬಲಯುತರಾದ ರಾಕ್ಷಸರನ್ನು ಮರ್ದಿಸಲು ಸರ್ವಶಕ್ತಿ ಸಂಪನ್ನಳಾಗಿ ಕಂಗೊಳಿಸಿದ ಪ್ರೌಢಿನಿಯಾದ ದೇವಿಗೆ ನಮಸ್ಕಾರಗಳು.

**87.** ವೃದ್ಧಮಾತಾ - ಓಂ ವೃದ್ಧಮಾತ್ರೇ ನಮಃ

ಸರ್ವಜ್ಞಾನವನ್ನೂ ಸಂಪಾದಿಸಿ, ಸರ್ವಜ್ಞಾನಮಯಿಯಾದ ತಾಳ್ಮೆಯ

